| | | | | | | |
|---|---|---|---|---|---|---|
| Gigaluru | Kundhgol/Dharwad | 0.80 | 72 | 1.1 | 4 | Lat: 15°05'15.9 N<br>Long: 75°11'15.9'' E |
| Hanumanahalli | Shiggoan/Haveri | 0.80 | 13/2 | 1.1 | 7 | Lat: 15°05'16.4 N<br>Long: 75°11'16.4'' E |
| Gigaluru | Kundhgol/Dharwad | 0.80 | 84 | 1.1 | 8 | Lat: 15°05'8.6" N<br>Long: 75°11'8.6'' E |
| N.M.Tadas | Shiggaon/Haveri | 0.80 | 34 | 1.1 | 16 | Lat: 15°04'50.3" N<br>Long: 75°11'50.30'' E |
| N.M.Tadas | Shiggaon/Haveri | 0.80 | 57 | 1.1 | 25 | Lat: 15°05'7" N<br>Long: 75°12'7'' E |
| | | **5.6** | | | | |
| Kunkur | Kundakhol/Dharwad | 0.80 | 37 | 1.1 | 75 | Lat: 15°7'10.9" N<br>Long: 75°12'46.7'' E |
| | **TOTAL** | **6.40** | | | | |

ಈ ಕೆಳಕಾಣಿಸಿದ ಲೊಕೇಷನ್‌ಗಳಿಗೆ ಬದಲಾಯಿಸಲಾಗಿದೆ

| Village Name | Taluk/ District | MW | Land Survey number | Extent of Land per WTG (Acres) | Wind Turbine Generator location No | Latitude, Longitude and Ridge peaks |
|---|---|---|---|---|---|---|
| Kunkur | Kundhgol/Dharwad | 0.80 | 143 | 1.1 | 1 | Lat: 15°07'37.5" N<br>Long: 75°9'59.45" E |
| Kunkur | Kundhgol/Dharwad | 0.80 | 138/2 | 1.1 | 3 | Lat: 15°07'31.1" N<br>Long: 75°10'26.55'' E |
| Kunkur | Kundhgol/Dharwad | 0.80 | 131/5 | 1.1 | 4 | Lat: 15°07'22.45" N<br>Long: 75°10'12.24'' E |
| Gigaluru | Kundhgol/Dharwad | 0.80 | 71 | 1.1 | 7 | Lat: 15°08'0.21" N<br>Long: 75°10'6.10'' E |
| Gigaluru | Kundhgol/Dharwad | 0.80 | 86/3C | 1.1 | 8 | Lat: 15°07'55.14" N<br>Long: 75°9'35.19'' E |
| N.M. Tadas | Shiggaon/Haveri | 0.80 | 43/4,<br>43/5 | 1.1 | 16 | Lat: 15°05'11.69" N<br>Long: 75°10'37.02'' E |
| N.M. Tadas | Shiggaon/Haveri | 0.80 | 64/7 | 1.1 | 25 | Lat: 15°05'5.75" N<br>Long: 75°10'21.21'' E |
| | | **5.6** | | | | |
| Kunkur | Kundhgol/Dharwad | 0.80 | 232/2 | 1.1 | 75 | Lat: 15°07'23.49" N<br>Long: 75°11'8.17'' E |
| | **TOTAL** | **6.40** | | | | |

ಸರ್ಕಾರಿ ಆದೇಶ ಸಂಖ್ಯೆ ಇಎನ್ 125 ಎನ್‌ಸಿಇ 2012 ದಿನಾಂಕ 29.3.2012ರಲ್ಲಿ ಮಂಜೂರಾಗಿರುವ ಒಟ್ಟು 16.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 0.8 ಮೆ.ವ್ಯಾ. ಸಾಮರ್ಥ್ಯದ ಒಂದು ಟರ್ಬೈನ್‌ನ ಲೊಕೇಷನ್ (WTG ಸಂಖ್ಯೆ – 40) ಮತ್ತು ಸರ್ಕಾರಿ ಆದೇಶ ಸಂಖ್ಯೆ ಇಎನ್ 149 ಎನ್‌ಸಿಇ 2012 ದಿನಾಂಕ 02.05.2012ರಲ್ಲಿ ಮಂಜೂರಾಗಿರುವ ಒಟ್ಟು 6.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 4.0 ಮೆ.ವ್ಯಾ. ಸಾಮರ್ಥ್ಯದ 5 ಟರ್ಬೈನ್‌ನ ಲೊಕೇಷನ್ (WTG ಸಂಖ್ಯೆ – 76, 77, 78, 79 ಮತ್ತು 90) ಸೇರಿ ಒಟ್ಟು 4.8 ಮೆ.ವ್ಯಾ.ಸಾಮರ್ಥ್ಯದ ಯೋಜನೆಗಳ ಈ ಕೆಳಕಂಡಂತಿರುವ ಟರ್ಬೈನ್‌ಗಳ ಲೊಕೇಷನ್‌ಗಳ ಬದಲಾಗಿ

| Village Name | Taluk/ District | MW | Land Survey number | Wind Turbine Generator location No | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Hirebendegeri | Shiggaon/Haveri | 0.80 | 226/2 | 40 | 1.1 | Lat: 15°4'50.3" N<br>Long: 75°11'50.3'' E |
| | | **0.80** | | | | |

| | | | | | | |
|---|---|---|---|---|---|---|
| Hirebendegeri | | 0.80 | 60/3A | 76 | 1.1 | Lat: 15°5'22.3" N<br>Long: 75°14'22.9'' E |
| Hirebendegeri | | 0.80 | 65 | 77 | 1.1 | Lat: 15°5'14" N<br>Long: 75°14'23.2'' E |
| Belavalakoppa | | 0.80 | 103/3&4 | 78 | 1.1 | Lat: 15°5'4.8" N<br>Long: 75°14'23'' E |
| Belavalakoppa | | 0.80 | 103/3&4 | 79 | 1.1 | Lat: 15°4'55.5" N<br>Long: 75°14'17.9'' E |
| Belavalakoppa | | 0.80 | 103/3&4 | 90 | 1.1 | Lat: 15°4'33.4" N<br>Long: 75°14'0.1'' E |
| | | **4.00** | | | | |
| | **TOTAL** | **4.8** | | | | |

**ಈ ಕೆಳಕಾಣಿಸಿದ ಲೊಕೇಷನ್‌ಗಳಿಗೆ ಬದಲಾಯಿಸಲಾಗಿದೆ**

| Village Name | Taluk/ District | MW | Land Survey number | Wind Turbine Generator location No | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kyalkonda | Shiggaon/Haveri | 0.80 | 212 | 141 | 1.1 | Lat: 15°4'3.2" N<br>Long: 75°16'36.21'' E |
| | | **0.80** | | | | |
| Hulgur | | 0.80 | 249 | 142 | 1.1 | Lat: 15°4'14.6" N<br>Long: 75°16'50.6'' E |
| Kyalkonda | | 0.80 | 9 | 143 | 1.1 | Lat: 15°4'14.2" N<br>Long: 75°16'28.1'' E |
| Kyalkonda | | 0.80 | 232 | 144 | 1.1 | Lat: 15°4'12.2" N<br>Long: 75°16'5.5'' E |
| Kyalkonda | | 0.80 | 7 | 150 | 1.1 | Lat: 15°4'23.25" N<br>Long: 75°16'18.19'' E |
| Kyalkonda | | 0.80 | 12 | 151 | 1.1 | Lat: 15°4'44.56" N<br>Long: 75°16'20.09'' E |
| | | **4.00** | | | | |
| | **TOTAL** | **4.8** | | | | |

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2295**

## ಇಂಧನ ಸಚಿವಾಲಯ

**ವಿಷಯ:** ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 25.20 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 210 ಎನ್‌ಸಿಇ 2005 ದಿನಾಂಕ: 20.8.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 463 ಎನ್‌ಸಿಇ 2006 ದಿನಾಂಕ: 22.12.2006.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: KRED/08/VWTIPL-(6 MW to 34.20 MW)/ Pamankallur-1/2011/2899 ದಿನಾಂಕ: 19/21.9.2011 ಮತ್ತು KRED/08/VWTIPL/2011/4381 ದಿನಾಂಕ: 11/23.11.2011 ಹಾಗೂ KRED/08/SRR/VWILLP-(6 MW to 34.20 MW)/2012/1897 ದಿನಾಂಕ: 05.07.2012.
4. ದಿನಾಂಕ 07.07.2012 ರಂದು ನಡೆದ ಹಂಚಿಕೆ ಸಮಿತಿ ನಡವಳಿ.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನ್.ಇ.ಜಿ. ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಾಗಲಕೋಟೆ, ರಾಯಚೂರು, ಬೀದರ್, ಬಿಜಾಪುರ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ 99.75 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನ್.ಇ.ಜಿ. ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಮಂಜೂರಾಗಿರುವ 99.75 ಮೆ.ವ್ಯಾ. ಸಾಮರ್ಥ್ಯದಿಂದ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಬಸಾಪುರ, ಗ್ರಾಮದಲ್ಲಿ ಮಂಜೂರಾಗಿರುವ ಅಂಶಿಕ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 34.20 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ, ಮತ್ತು ಸದರಿ ಯೋಜನೆಯನ್ನು ಅರಣ್ಯ, ಕಂದಾಯ ಮತ್ತು ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸಲಾಗುವುದೆಂದು ತಿಳಿಸಿ ದಿನಾಂಕ 19/21.9.2011ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆನಂತರ ದಿನಾಂಕ 05.07.2012ರ ಪತ್ರದಲ್ಲಿ ಯೋಜನೆಯು ಬರುವ ಒಟ್ಟಾರೆ ಜಮೀನಿನಲ್ಲಿ 34.46 ಎಕರೆ ಅರಣ್ಯ ಭೂಮಿಯಲ್ಲಿ 5 locations ಕಂದಾಯ ಇಲಾಖೆಯ 49.15 ಎಕರೆ ಜಮೀನಿನಲ್ಲಿ 9 locations ಹಾಗೂ 19.3 ಎಕರೆ ಖಾಸಗಿ ಜಮೀನಿನಲ್ಲಿ 5 locations ಗಳನ್ನು ಹೊಂದಿದ್ದು, ಅರಣ್ಯ ಇಲಾಖೆಯ ಜಮೀನಿನಲ್ಲಿ ಬರುವ ಯೋಜನೆಯನ್ನು ಹೊರತುಪಡಿಸಿ ಖಾಸಗಿ ಮತ್ತು ಸರ್ಕಾರಿ ಜಮೀನಿನಲ್ಲಿ ಬರುವ ಸಾಮರ್ಥ್ಯ ಹೆಚ್ಚಳವನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ :07.07.2012ರಂದು ನಡೆದ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ರವರು ಕಂದಾಯ ಮತ್ತು ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸಲಿರುವ ಯೋಜನೆಗಳ ಸಾಮರ್ಥ್ಯವನ್ನು 25.20 ಮೆ.ವ್ಯಾ.ಗೆ ಹೆಚ್ಚಿಸಲು ಸಮಿತಿಯು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 388 ಎನ್‌ಸಿಇ 2011, ಬೆಂಗಳೂರು, ದಿನಾಂಕ: 26.07.2012.**

ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಜಿಲ್ಲೆಯ ಬಸಾಪುರ ಗ್ರಾಮದಲ್ಲಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಅರಣ್ಯ ಇಲಾಖೆಯ 34.46 ಎಕರೆ ಜಮೀನಿನಲ್ಲಿ ಬರುವ 9.00 ಮೆ.ವ್ಯಾ. ಸಾಮರ್ಥ್ಯವನ್ನು ಹೊರತು ಪಡಿಸಿ ಕಂದಾಯ ಜಮೀನು 49.15 ಎಕರೆಯಲ್ಲಿ 9 ಲೋಕೇಷನ್‌ಗಳಿಂದ 16.2 ಮೆ.ವ್ಯಾ. ಮತ್ತು ಖಾಸಗಿ ಜಮೀನಿನಲ್ಲಿ 19.3 ಎಕರೆಯಲ್ಲಿ 5 ಲೊಕೇಷನ್‌ಗಳಿಂದ 9.00 ಮೆ.ವ್ಯಾ. ಅನುಷ್ಠಾನಗೊಳಿಸಲಿರುವ ಯೋಜನೆಗಳ ಒಟ್ಟು ಸಾಮರ್ಥ್ಯವನ್ನು **25.20 ಮೆಗಾ ವ್ಯಾಟ್** ಸಾಮರ್ಥ್ಯಕ್ಕೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಮತ್ತು ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಿ ಆದೇಶಿಸಿದೆ.**

| Sl No. | WTG No. | District | Taluk | Village | Survey No. | Extent (Acres) |
|---|---|---|---|---|---|---|
| **REVENUE LAND** | | | | | | |
| 1 | | Raichur | Manvi | Pamenkallur | 151 | 0.34 |
| 2 | | Raichur | Lingsugur | Chikkahesugur | 35 | 6.12 |
| 3 | P11 | Raichur | Lingsugur | Chikkahesugur | 41 | 10.27 |
| 4 | P5, P19 | Raichur | Lingsugur | Basapur | 77 | 7.76 |
| 5 | P6, P8, P12 | Raichur | Lingsugur | Huvinabhavi | 32 | 10.88 |
| 6 | P2, P3, P16 | Raichur | Lingsugur | Huvinabhavi | 44/1 | 13.78 |
| | **TOTAL** | | | | | **49.15** |
| **PRIVATE LAND** | | | | | | |
| 1 | | Raichur | Manvi | Pamenkallur | 168 | 0.65 |
| 2 | | Raichur | Lingsugur | Chikkahesugur | 36 | 0.79 |
| 3 | | Raichur | Lingsugur | Chikkahesugur | 37 | 0.31 |
| 4 | P13 | Raichur | Lingsugur | Chikkahesugur | 40 | 3.14 |
| 5 | P10 | Raichur | Lingsugur | Chikkahesugur | 45 | 3.50 |
| 6 | P17 | Raichur | Lingsugur | Basapur | 73 | 2.72 |
| 7 | | Raichur | Lingsugur | Basapur | 72 | 0.49 |
| 8 | P15 | Raichur | Lingsugur | Basapur | 59 | 3.32 |
| 9 | | Raichur | Lingsugur | Huvinabhavi | 44/8 | 0.29 |

| | | | | | | |
|---|---|---|---|---|---|---|
| 10 | | Raichur | Lingsugur | Huvinabhavi | 44/7 | 0.01 |
| 11 | P14 | Raichur | Lingsugur | Huvinabhavi | 44/5 | 3.45 |
| 12 | | Raichur | Lingsugur | Huvinabhavi | 44/4 | 0.55 |
| 13 | | Raichur | Lingsugur | Bhuddini | 9 | 0.03 |
| 14 | | Raichur | Lingsugur | Bhuddini | 8(2) | 0.05 |
| | **TOTAL** | | | | | **19.30** |

1 **ಮೆ::** ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ ::** ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.

3 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2298**

## ಇಂಧನ ಸಚಿವಾಲಯ

**ವಿಷಯ:** ಮೆ:: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:** **1.** ಸರ್ಕಾರಿ ಆದೇಶ ಸಂಖ್ಯೆ: ಇಎನ್ 60 ಎನ್‌ಸಿಇ 2005 ದಿನಾಂಕ: 22.3.2005.
**2.** ಸರ್ಕಾರಿ ಆದೇಶ ಸಂಖ್ಯೆ: ಇಎನ್ 560 ಎನ್‌ಸಿಇ 2009 ದಿನಾಂಕ: 12.11.2010.
**3.** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/SRL-16.8 MW/2012/1462 ದಿನಾಂಕ: 21/24.05.2012

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಕರ್ನಾಟಕದ ವಿವಿಧ ಸ್ಥಳಗಳಲ್ಲಿ 34.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ : ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಮೇಲಿನ ಆದೇಶದಲ್ಲಿ ಹಂಚಿಕೆಯಾಗಿದ್ದ 34.8 ಮೆ.ವ್ಯಾ. ಸಾಮರ್ಥ್ಯದಲ್ಲಿ ದಾವಣಗೆರೆ ಜಿಲ್ಲೆಯ ರಂಗಯ್ಯನದುರ್ಗ ಅರಣ್ಯ ಪ್ರದೇಶದಲ್ಲಿ ಹಂಚಿಕೆಯಾಗಿದ್ದ 1.80 ಮೆ.ವ್ಯಾ ಅಂಶಿಕ ಸಾಮರ್ಥ್ಯವನ್ನು 16.80 ಮೆ.ವ್ಯಾ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಮೇಲ್ಕಂಡ ಆದೇಶಗಳಲ್ಲಿ ಅನುಮತಿಸಿರುವ 16.80 ಮೆ.ವ್ಯಾ. ಸಾಮರ್ಥ್ಯದ ಯೋಜನಾ ಸ್ಥಳವನ್ನು Wildlife (Protection) Act 1972 ರಲ್ಲಿನ ಅವಕಾಶದನ್ವಯ Rangayyanadurga Four-horned Antelope Wildlife Sanctuary ಎಂದು ಅರಣ್ಯ ಇಲಾಖೆಯು ಘೋಷಿರುವುದರಿಂದ ಸದರಿ ಸ್ಥಳದಲ್ಲಿ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆಗಳನ್ನು ರದ್ದುಗೊಳಿಸುವಂತೆ ಅಭಿವೃದ್ಧಿದಾರರು ಕೋರಿರುವುದರಿಂದ, ಅಭಿವೃದ್ಧಿದಾರರ ಕೋರಿಕೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 167 ಎನ್‌ಸಿಇ 2012, ಬೆಂಗಳೂರು, ದಿನಾಂಕ: 03.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆದೇಶ ಸಂಖ್ಯೆ :ಇಎನ್ 60 ಎನ್‌ಸಿಇ 2005 ದಿನಾಂಕ: 22.03.2005 ಹಾಗೂ ಸಂಖ್ಯೆ : ಇಎನ್ 560 ಎನ್‌ಸಿಇ 2009 ದಿನಾಂಕ: 12.11.2010ರ ಸರ್ಕಾರಿ ಆದೇಶಗಳಲ್ಲಿ ದಾವಣಗೆರೆ ಜಿಲ್ಲೆಯ ಬಸವನಕೋಟೆ ಗ್ರಾಮದ ರಂಗಯ್ಯನದುರ್ಗ ಅರಣ್ಯ ಪ್ರದೇಶದಲ್ಲಿ, ಮೆ:: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 16.80 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2301**

## ಇಂಧನ ಸಚಿವಾಲಯ

**ವಿಷಯ:** ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರ ರದ್ದುಪಡಿಸಿರುವ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವ ಸ್ಥಿತಿಗೆ ತಂದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 29 ಎನ್‌ಸಿಇ 2002 ದಿನಾಂಕ: 13.6.2002.
2. ತಿದ್ದುಪಡಿ ಆದೇಶ ಸಂಖ್ಯೆ: ಇಂಇ 88 ಎನ್‌ಸಿಇ 2005 ದಿನಾಂಕ: 28.3.2005.
3. ಸರ್ಕಾರಿ ಆದೇಶ ಸಂಖ್ಯೆ: ಇಂಇ 107 ಎನ್‌ಸಿಇ 2005 ದಿನಾಂಕ: 15.4.2005.
4. ಸರ್ಕಾರದ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2010 ದಿನಾಂಕ: 23.06.2010.
5. ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2010 ದಿನಾಂಕ: 25.06.2010.
6. ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ 29270/2010 ರ ಕುರಿತಂತೆ ಮಾನ್ಯ ನ್ಯಾಯಾಲಯದ ಆದೇಶ ದಿನಾಂಕ 19.8.2011.
7. ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರ ಮನವಿ ಪತ್ರ ದಿನಾಂಕ 25.10.2011
8. ಸರ್ಕಾರದ ಪತ್ರ ಸಂಖ್ಯೆ ಇಎನ್ 414 ಎನ್‌ಸಿಇ 2010 ದಿನಾಂಕ : 16.11.2011.
9. ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರ ಪತ್ರ ದಿನಾಂಕ 01.12.2011
10. ಸರ್ಕಾರದ ಪತ್ರ ಸಂಖ್ಯೆ ಇಎನ್ 414 ಎನ್‌ಸಿಇ 2010 ದಿನಾಂಕ : 22.12.2011.
11. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/SH-91/2012-13/1979 ದಿನಾಂಕ: 07/12.07.2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಗ್ರಾಮದಲ್ಲಿ ವಿಜಯನಗರ ಅಣೆಕಟ್ಟಿನ ಕೆಳ ತೊರೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಸಿರಗುಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ತಿದ್ದುಪಡಿ ಆದೇಶದಲ್ಲಿ ಕಂಪನಿಯ ಹೆಸರನ್ನು ಮೆ॥ ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ನಿಂದ ಮೆ॥ ಶ್ರೀ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂದು ಬದಲಾಯಿಸಲಾಗಿತ್ತು. ಈ ಯೋಜನೆಯ ಸಾಮರ್ಥ್ಯವನ್ನು 1.5 ಮೆ.ವ್ಯಾ. ನಿಂದ 4.5 ಮೆ.ವ್ಯಾ.ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಹಾಗೂ (5) ರ ಆದೇಶ ಹಾಗೂ ತಿದ್ದುಪಡಿಯಲ್ಲಿ ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಗ್ರಾಮದಲ್ಲಿ ವಿಜಯನಗರ ಅಣೆಕಟ್ಟಿನ ಕೆಳ ತೊರೆಯಲ್ಲಿ ಹಂಚಿಕೆಯಾಗಿದ್ದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿದ್ದ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು. ಮೆ॥ ಶ್ರೀ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರು ಕರ್ನಾಟಕ ಮಾನ್ಯ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 29270/2010ನ್ನು ದಾಖಲಿಸಿ ಈ ಕೆಳಕಂಡಂತೆ ಕೋರಿಕೆಯನ್ನು ಸಲ್ಲಿಸಿದ್ದರು.

I. Issue a writ of certiorari or any other appropriate writ, order or direction quashing the impugned order bearing No. EN 149 NCE 2010 dated 23.6.2010 passed by the 1st respondent ;

II. Issue a writ of mandamus or any other appropriate writ, order or direction directing the 2nd respondent to give its clearance to the pititioner in terms of its letter dated 5.5.2006 ;

III. Issue a writ of mandamus or any other appropriate writ, order or direction directing the 1st respondent to extend time for commissioning the project by another 2 years from the date of issuance of clearance from the 2nd respondent ;

IV. Grant such other reliefs as this Hon'ble Court deems fit to grant on the facts and circumstances of the case including awarding of costs.

ಈ ರಿಟ್ ಅರ್ಜಿ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿನ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವು ಈ ಕೆಳಕಂಡಂತಿದೆ :

"7. The petitioner shall on its own approach the 1st respondent and seek for a copy of the show-cause notice dated 26.04.2010 which is stated to have been issued by the 1st respondent at the first instance. On receipt of the copy of the show-cause notice the petitioner shall make a reply to the 1st respondent. The 1st respondent shall thereafter consider the cause shown by the petitioner and if necessary, the 1st respondent shall also seek for further details from the petitioner relating to the project and thereafter the 1st respondent shall take appropriate decision one way or the other in the matter by passing a well reasoned order.

8. In terms of the above on quashing the order dated 23.6.2010, the petition stands disposed of. No order as to costs''.

ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಪತ್ರದಲ್ಲಿ ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರು ಕಾರಣ ಕೇಳುವ ನೋಟೀಸನ್ನು ನೀಡುವಂತೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದರು ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದೊಂದಿಗೆ ದಿನಾಂಕ 26.4.2010ರ ಕಾರಣ ಕೇಳುವ ನೋಟೀಸಿನ ಪ್ರತಿಯನ್ನು ಅಭಿವೃದ್ಧಿದಾರರಿಗೆ ಕಳುಹಿಸುತ್ತಾ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಸಾಧಿಸಿರುವ ಪ್ರಗತಿಯ ಬಗ್ಗೆ ಪೂರಕ ದಾಖಲೆಗಳೊಂದಿಗೆ ಉತ್ತರವನ್ನು ನೀಡುವಂತೆ ಕೋರಲಾಗಿತ್ತು. ಈ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧದಾರರು ಮೇಲೆ ಓದಲಾದ ಕ್ರಮ ಸಂಖ್ಯೆ (9) ರ ಪತ್ರದಲ್ಲಿ ಉತ್ತರವನ್ನು ನೀಡುತ್ತಾ ಯೋಜನೆಗೆ ಅವಶ್ಯವಿರುವ ಎಲ್ಲಾ ಅನುಮೋದನೆಗಳನ್ನು ಪಡೆಯಲಾಗಿದ್ದು ಪರಿಸರ ಇಲಾಖೆಯಿಂದ ಅನುಮೋದನೆ ಪಡೆಯಲು ವಿಳಂಬವಾದುದರಿಂದ ಯೋಜನೆಯನ್ನು ನಿಗಧಿತ ಅವಧಿಯೊಳಗಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸುತ್ತಾ ಯೋಜನೆಯನ್ನು ಪೂರ್ವ ಸ್ಥಿತಿಗೆ ತಂದು ಎರಡು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುತ್ತಾರೆ. ಈ ಉತ್ತರವನ್ನು ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್. ರವರಿಗೆ ಕಳುಹಿಸಿ ಅವರ ಅಭಿಪ್ರಾಯವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (10) ರ ಪತ್ರದಲ್ಲಿ ಕೋರಲಾಗಿತ್ತು.

ಸದರಿ ಯೋಜನಾದಾರರು ಯೋಜನೆಯನ್ನು ಅನುಷ್ಠಾನಗೊಳಿಸಲು ಬೇಕಾಗಿರುವ ಎಲ್ಲಾ ಅನುಮೋದನೆಗಳನ್ನು ಪಡೆದಿದ್ದು ಯೋಜನೆಗೆ ಅವಶ್ಯವಿರುವ ಜಮೀನನ್ನು ವಶಪಡಿಸಿಕೊಂಡಿರುತ್ತಾರೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (11) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ವರದಿ ಮಾಡುತ್ತಾ ಕೆಳಕಂಡ ಷರತ್ತುಗಳಿಗೊಳಪಡಿಸಿ ಯೋಜನೆಯನ್ನು ಪೂರ್ವ ಸ್ಥಿತಿಗೆ ತರಬಹುದಾಗಿದೆ ಎಂದು ಅಭಿಪ್ರಾಯವನ್ನು ನೀಡಿರುತ್ತಾರೆ.

1. ಈ ಯೋಜನೆಯನ್ನು ಪೂರ್ವ ಸ್ಥಿತಿಗೆ ತಂದ 2 ವರ್ಷದೊಳಗಾಗಿ ಅನುಷ್ಠಾನಗೊಳಿಸಬೇಕು.
2. ಪ್ರತಿ ಮೆಗಾ ವ್ಯಾಟ್‌ಗೆ ರೂ. 3.00 ಲಕ್ಷ ಪ್ರಕಾರ ಎರಡು ವರ್ಷಗಳಿಗೆ ಆಗುವಂತೆ Bank Guarantee & Performance Guarantee ಯನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸಬೇಕು.
3. ಅಭಿವೃದ್ಧಿದಾರರು ಕಂಪನಿಯ ಇತ್ತೀಚಿನ Networth Certificate ನ್ನು ನಿಗಧಿತ ನಮೂನೆಯಲ್ಲಿ ಕೆ.ಆರ.ಇ.ಡಿ.ಎಲ್.ಗೆ ಸಲ್ಲಿಸಬೇಕು.
4. ಕಾಲಾವಧಿ ವಿಸ್ತರಣೆ ಶುಲ್ಕವನ್ನು ದಿನಾಂಕ 06.1.2009 ರಿಂದ ಪಾವತಿಸಬೇಕು.
5. 6.70 ಎಕರೆ ಸರ್ಕಾರಿ ಜಮೀನನ್ನು ಸದರಿ ಕಂಪನಿಗೆ ಉಪ ಗುತ್ತಿಗೆ ನೀಡಿರುವುದರಿಂದ ಯೋಜನೆಯನ್ನು ಜರೂರಾಗಿ ಅನುಷ್ಠಾನಗೊಳಿಸಬೇಕೆಂದು ಆದೇಶಿಸಬೇಕು.
6. ಯೋಜನೆಯ ಪ್ರಗತಿಯನ್ನು ಪ್ರತಿ ತಿಂಗಳು ಕೆ.ಆರ್.ಇ.ಡಿ.ಎಲ್.ಗೆ ಸಲ್ಲಿಸಬೇಕು.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 414 ಎನ್‌ಸಿಇ 2010, ಬೆಂಗಳೂರು, ದಿನಾಂಕ: 04.10.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಮೆ॥ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಗ್ರಾಮದಲ್ಲಿನ ವಿಜಯನಗರ ಅಣೆಕಟ್ಟಿನ ಕೆಳ ತೊರೆಯಲ್ಲಿ ಹಂಚಿಕೆಯಾಗಿದ್ದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಸಿರಗುಪ್ಪ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2010 ದಿನಾಂಕ: 23.06.2010 ರಲ್ಲಿ ರದ್ದುಪಡಿಸಿರುವುದನ್ನು ಹಿಂಪಡೆದು ಈ ಕೆಳಗಿನ ನಿಬಂಧನೆಗೊಳಪಟ್ಟು ಯೋಜನೆಯನ್ನು ಪೂರ್ವಸ್ಥಿತಿಗೆ ತರಲಾಗಿದೆ :–

1. ಈ ಯೋಜನೆಯನ್ನು ಸದರಿ ಆದೇಶ ಹೊರಡಿಸಿದ ಎರಡು ವರ್ಷಗಳೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಅಭಿವೃದ್ಧಿದಾರರು ಮೆಗಾ ವ್ಯಾಟ್ ಒಂದಕ್ಕೆ 3.00 ಲಕ್ಷದಂತೆ Bank Guarantee & Performance Guarantee ಯನ್ನು ಕೆ.ಆರ್.ಇ.ಡಿ.ಎಲ್.ಗೆ ನೀಡತಕ್ಕದ್ದು.
2. ಸರ್ಕಾರದ ಆದೇಶಾನುಸಾರ ಅವಶ್ಯವಿರುವ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ದಿನಾಂಕ 06.1.2009 ರಿಂದ ಪಾವತಿಸತಕ್ಕದ್ದು
3. ಕಂಪನಿಯ ಇತ್ತೀಚಿನ ನೆಟ್‌ವರ್ತ್ ಪ್ರಮಾಣಪತ್ರವನ್ನು ನಿಗಧಿತ ನಮೂನೆಯಲ್ಲಿ ಕೆ.ಆರ್.ಇ.ಡಿ.ಎಲ್.ಗೆ ಸಲ್ಲಿಸತಕ್ಕದ್ದು.
4. ಯೋಜನೆಯ ಪ್ರಗತಿಯನ್ನು ಪ್ರತಿ ತಿಂಗಳು ಕೆ.ಆರ್.ಇ.ಡಿ.ಎಲ್.ಗೆ ತಿಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2218**

## ಇಂಧನ ಸಚಿವಾಲಯ

**ವಿಷಯ:** ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಜೂರಾಗಿರುವ 30.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 15.30 ಮೆ.ವ್ಯಾ. ಸಾಮರ್ಥ್ಯಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇನ್ 337 ಎನ್‌ಸಿಇ 2006 ದಿನಾಂಕ: 16.10.2006.
2. ಸರ್ಕಾರಿ ಆದೇಶ ಸಂಖ್ಯೆ: ಇನ್ 09 ಎನ್‌ಸಿಇ 2007 ದಿನಾಂಕ: 12.1.2007.
3. ಸರ್ಕಾರಿ ಆದೇಶ ಸಂಖ್ಯೆ: ಇನ್ 432 ಎನ್‌ಸಿಇ 2010 ದಿನಾಂಕ: 16.12.2010.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2011 ದಿನಾಂಕ: 26.7.2011
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 166 ಎನ್‌ಸಿಇ 2011 ದಿನಾಂಕ: 25.7.2011
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 89 ಎನ್‌ಸಿಇ 2012(4) ದಿನಾಂಕ: 05.03.2012.
7. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/RSR-30.6MW/HMM 60/2012/2093 ದಿನಾಂಕ: 20/23.07.2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ : ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮತಿ ನೀಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆ ಮಾಡಿರುವ ಒಟ್ಟು ಸಾಮರ್ಥ್ಯದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ. ಅಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ. ಸಾಮರ್ಥ್ಯವನ್ನು 30.60 ಮೆ.ವ್ಯಾ.ಗೆ ಹೆಚ್ಚಿಸಿ, 25 ಮೆ.ವ್ಯಾ. ವಿದ್ಯುತ್ತನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದ್ದು ಹಾಗು ಈ ಯೋಜನೆಯನ್ನು ದಿ: 31.3.2011ರೊಳಗೆ ಅನುಷ್ಟಾನಗೊಳಿಸತಕ್ಕದ್ದೆಂದು ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 31.12.2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಆದೇಶದಲ್ಲಿ ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ನೆಲಗಂಟಿ ಗ್ರಾಮದ ಅಂಶಿಕ ಸಾಮರ್ಥ್ಯವನ್ನು 15 ಮೆ.ವ್ಯಾ ನಿಂದ 40 ಮೆ.ವ್ಯಾ.ಗೆ ಹಾಗೂ ಉಮ್ರಾಣಿ ಗ್ರಾಮದ ಅಂಶಿಕ ಸಾಮರ್ಥ್ಯವನ್ನು 15 ಮೆ.ವ್ಯಾ. ನಿಂದ 100 ಮೆ.ವ್ಯಾ.ಗೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಆದೇಶದಲ್ಲಿ ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 30.60 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಈ ಸಾಮರ್ಥ್ಯದಲ್ಲಿ 25 ಮೆ.ವ್ಯಾ. ಸಾಮರ್ಥ್ಯವನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡುವಂತೆ ಸರ್ಕಾರಿ ಆದೇಶ ಸಂ:ಇಎನ್ 432 ಎನ್‌ಸಿಇ 2010 ದಿ:16.12.2010 ರಲ್ಲಿ ವಿಧಿಸಿರುವ ಷರತ್ತನ್ನು ತೆಗೆದುಹಾಕಲಾಗಿತ್ತು ಮತ್ತು ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯು ಬೆಳಗಾವಿ ಜಿಲ್ಲೆಯಲ್ಲಿ ಕೈಗೊಳ್ಳುತ್ತಿರುವ 40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 25 ಮೆ.ವ್ಯಾ. ಸಾಮರ್ಥ್ಯವನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದ್ದು ಹಾಗೂ ಸದರಿ ಕಂಪನಿಯು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಅನುಷ್ಠಾನ ಮಾಡಲು ಬಾಕಿ ಇರುವ 17.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.06.2012 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ (7)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಈಗಾಗಲೇ 15.3 ಮೆ.ವ್ಯಾ. ಸಾವ್ಮರ್ಥ್ಯವನ್ನು ಜೂನ್ ತಿಂಗಳಲ್ಲಿ ಅನುಷ್ಠಾನಗೊಳಿಸಲಾಗಿದ್ದು, ಉಳಿದ 15.3 ಮೆ.ವ್ಯಾ. ಸಾಮರ್ಥ್ಯವನ್ನು ಅನುಷ್ಠಾನಗೊಳಿಸಲು ದಿನಾಂಕ 31.03.2013 ರವರೆಗೆ ಕಾಲಾವಕಾಶವನ್ನು ವಿಸ್ತರಿಸಲು ಅಭಿವೃದ್ಧಿದಾರರು ಕೋರಿದ್ದು ಕಾಮಗಾರಿ ಪ್ರಗತಿಯಲ್ಲಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯಂತೆ ಕಾಲಾವಕಾಶವನ್ನು ವಿಸ್ತಿರಿಸುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 225 ಎನ್‌ಸಿಇ 2012 ಬೆಂಗಳೂರು, ದಿನಾಂಕ:06.08.2012**

ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ, ಬಾಕಿ ಉಳಿದಿರುವ 15.3 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಅಂತಿಮವಾಗಿ ಕಾಲಾವಕಾಶವನ್ನು ನಿಗದಿತ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ಕ್ರೆಡಲ್‌ಗೆ ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ದಿನಾಂಕ: 31.03.2013ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

PR. 2265

**ಇಂಧನ ಸಚಿವಾಲಯ**

**ಸಂಖ್ಯೆ: ಇಎನ್ 243 ಎನ್‌ಸಿಇ 2012, ಬೆಂಗಳೂರು, ದಿನಾಂಕ: 18.8.2012.**

**ತಿದ್ದುಪಡಿ**

ಮೆ:: Dee Vee Power ರವರಿಗೆ ಕೊಡಗು ಜಿಲ್ಲೆಯ, ಸೋಮವಾರಪೇಟೆ ತಾಲ್ಲೂಕಿನ, ಕುಶಾಲನಗರದ, ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶದಲ್ಲಿ 2 ಮೆ.ವ್ಯಾ ಸಾಮರ್ಥ್ಯದ ಜೈವಿಕ ಇಂಧನ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ಅನುಮತಿಸಿರುವ ಸರ್ಕಾರಿ ಆದೇಶ ಸಂಖ್ಯೆ :ಇಎನ್ 305 ಎನ್‌ಸಿಇ 2011 ದಿನಾಂಕ: 20.07.2011ರ **ಆದೇಶ ಭಾಗದ ಕ್ರಮ ಸಂಖ್ಯೆ (2)ರಲ್ಲಿ ನಮೂದಿಸಲಾಗಿರುವ**

The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.

ಬದಲಾಗಿ

**The company shall enter into Wheeling and Banking agreement with KPTCL and PPA is assigned to Chamundeshwari Electricity Supply Corporation Limited (CESC), Mysore.**

ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

PR. 2266

## ಇಂಧನ ಸಚಿವಾಲಯ

**ವಿಷಯ:** ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಮತ್ತು ಅದರ ಸಮೂಹ ಕಂಪನಿಗಳಿಗೆ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ 147.28 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಡಿಇ 247 ಎನ್‌ಸಿಇ 2002 ದಿನಾಂಕ: 05.3.2002.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 285 ಎನ್‌ಸಿಇ 2005 ದಿನಾಂಕ: 14.10.2005.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 463 ಎನ್‌ಸಿಇ 2006 ದಿನಾಂಕ: 22.12.2006.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 441 ಎನ್‌ಸಿಇ 2011 ದಿನಾಂಕ: 28.5.2012.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/VWTIPL–183.58 MW/2012/1472, ದಿನಾಂಕ: 23/26.05.2012

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಚಿತ್ರದುರ್ಗ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ಎರಮಲೆ, ಕಣ್ವೆಕರ್ವಿಕಾಪ ಮತ್ತು ಕಮ್ಮಕರಕಟ್ಟೆ ಗ್ರಾಮಗಳಲ್ಲಿ ಒಟ್ಟು 10 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಸದರಿ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಹನುಮಪುರ ಮತ್ತು ಚಿಂಚನಹಳ್ಳಿ ಗ್ರಾಮಗಳಲ್ಲಿ 18.15 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರಿ ಆದೇಶದಲ್ಲಿ ಮೆ : ಎನ್.ಇ.ಜಿ. – ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ 119.13 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರಿ ಆದೇಶದಲ್ಲಿ ಮೆ: ಎನ್.ಇ.ಜಿ. – ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ : ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 283 ಎನ್‌ಸಿಇ 2005 ದಿನಾಂಕ 14.10.2005 ಮತ್ತು ಆದೇಶ ಸಂಖ್ಯೆ ಇಎನ್ 284 ಎನ್‌ಸಿಇ 2005 ದಿನಾಂಕ 14.10.2005 ರಲ್ಲಿ ಈ ಕೆಳಗೆ ವಿವರಿಸಿರುವಂತೆ ಹಂಚಿಕೆಯಾಗಿರುವ ಒಟ್ಟು 36.30 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿತ್ತು.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|
| ಇನ್ 283 ಎನ್‌ಸಿಇ 2005<br>ದಿನಾಂಕ: 14.10.2005 | ಉತ್ತರ ಕನ್ನಡ ಜಿಲ್ಲೆಯ ನ್ಯಾಸರ್ಗಿ, ಸನ್ವಳ್ಳಿ, ಅಯ್ಯನ್ಕೇರಿಗುಡ್ಡ ಮತ್ತು ಯಲ್ಲಾಪುರ ಗ್ರಾಮಗಳಲ್ಲಿ. | 26.4 |
| ಇನ್ 284 ಎನ್‌ಸಿಇ 2005<br>ದಿನಾಂಕ: 14.10.2005 | ಬೆಳಗಾವಿ ಜಿಲ್ಲೆಯ ಚಂದು ಡೊಂಗಾರ್, ಸಂಶೇರ್ಗಡ್ ಮತ್ತು ಸವರ್ಗಾಲಿ. | 9.9 |
| | **ಒಟ್ಟು** | **36.30** |

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವಿವಿಧ ಆದೇಶಗಳಲ್ಲಿ ಹಂಚಿಕೆಯಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವ ಸ್ಥಳವು ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಗ್ಯವಿರುವುದಿಲ್ಲವಾದ್ದರಿಂದ ಈ ಸಾಮರ್ಥ್ಯವನ್ನು ಸರ್ಕಾರಕ್ಕೆ ಅಧ್ಯರ್ಪಿಸಲು ಸಿದ್ದರಿರುವುದಾಗಿ ತಿಳಿಸಿರುವುದರಿಂದ, ಅಭಿವೃದ್ಧಿದಾರರ ಕೋರಿಕೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಅಧ್ಯರ್ಪಿಸಲು ಉದ್ದೇಶಿಸಿರುವ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|
| ಇಂಇ 247 ಎನ್‌ಸಿಇ 2002 ದಿನಾಂಕ: 05.3.2002 | ಬೆಳಗಾವಿ ಜಿಲ್ಲೆಯ ಎರಮಲೆ, ಕಣ್ವಿಕರ್ವಿಕಾಪ ಮತ್ತು ಕಮ್ಮಕರಕಟ್ಟೆ ಗ್ರಾಮಗಳಲ್ಲಿ. | 10 |
| ಇಎನ್ 283 ಎನ್‌ಸಿಇ 2005 ದಿನಾಂಕ: 14.10.2005 | ಉತ್ತರ ಕನ್ನಡ ಜಿಲ್ಲೆಯ ನ್ಯಾಸರ್ಗಿ, ಸನ್ವಳ್ಳಿ, ಅಯ್ಯನ್ಕೇರಿಗುಡ್ಡ ಮತ್ತು ಯಲ್ಲಾಪುರ ಗ್ರಾಮಗಳಲ್ಲಿ. | 26.4 |
| ಇಎನ್ 284 ಎನ್‌ಸಿಇ 2005 ದಿನಾಂಕ: 14.10.2005 | ಬೆಳಗಾವಿ ಜಿಲ್ಲೆಯ ಚಂದು ಡೊಂಗಾರ್, ಸಂಶೇರ್ಗಡ್ ಮತ್ತು ಸವರ್ಗಾಲಿ ಗ್ರಾಮಗಳಲ್ಲಿ. | 9.9 |
| ಇಎನ್ 285 ಎನ್‌ಸಿಇ 2005 ದಿನಾಂಕ: 14.10.2005 | ಚಾಮರಾಜನಗರ ಜಿಲ್ಲೆಯ ಹನುಮಪುರ ಮತ್ತು ಚಿಂಚನಹಳ್ಳಿ ಗ್ರಾಮಗಳಲ್ಲಿ. | 18.15 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ವಡ್ರಾಳ್, ಬೀದರಹಳ್ಳಿ ಮತ್ತು ಹತ್ತರವಾರ್ ಗ್ರಾಮಗಳಲ್ಲಿ. | 11.55 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳ ಹತ್ತರವಾರ್, ಹುಲ್ಲಿಕಟ್ಟಿ, ಉಗರಕೋಡ, ಹಿರೇನಂದಿಹಳ್ಳಿ, ಮಲ್ಲಾಪುರ, ಕಿತ್ತೂರು, ಕಲ್ಲಾಪುರ, ಸಿಂಗನಹಳ್ಳಿ, ಹೆಗ್ಗೇರಿ ಗ್ರಾಮಗಳಲ್ಲಿ. | 28.05 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಶಿವಮೊಗ್ಗಾ ಜಿಲ್ಲೆಯ ವೇಮಲ್ಯೆಗುಡ್ಡಾ, ಸಿಂಗನಬಿಡಾರೆ, ಕುಲ್ಲುಂಡಿ, ಬಲೆಕಲ್ಲುಗುಡ್ಡಾ ಗ್ರಾಮಗಳಲ್ಲಿ. | 38.28 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಚಿಕ್ಕಮಗಳೂರು ಜಿಲ್ಲೆಯ ಹೆದ್ದೂರು, ಗಣಪತಿಕಟ್ಟೆ, ಹಿರೆಕೊಡಗಿ, ಹರಿಹರಪುರ, ಕೊಪ್ಪ, ಅಲಂದೂರು, ಮದಬೂರು ಮತ್ತು ಮುಟ್ಟಿನಕೊಪ್ಪ | 41.25 |
| **ಎಲ್ಲಾ ಸೇರಿ ಒಟ್ಟು** | | **183.58** |

ಮೇಲೆ ನಮೂದಿಸಿರುವ ಕೊಷ್ಟಕದಲ್ಲಿನ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ 36.30 ಮೆ.ವ್ಯಾ. ಸಾಮರ್ಥ್ಯವನ್ನು ಮೇಲೆ (5)ರಲ್ಲಿ ಓದಲಾದ ಆದೇಶದಲ್ಲಿ ಈಗಾಗಲೇ ರದ್ದುಪಡಿಸಲಾಗಿದೆ. ಉಳಿದ ಯೋಜನೆಗಳು ಪಶ್ಚಿಮ ಘಟ್ಟ ವ್ಯಾಪ್ತಿಯಲ್ಲಿ ಬರುತ್ತಿರುವುದರಿಂದ ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 441 ಎನ್‌ಸಿಇ 2011, ಬೆಂಗಳೂರು, ದಿನಾಂಕ: 08.11.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಕಂಡ ಕೋಷ್ಟಕದಲ್ಲಿ ವಿವರಿಸಿರುವಂತೆ ಹಂಚಿಕೆಯಾಗಿರುವ ಒಟ್ಟು 147.28 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಅಧ್ಯರ್ಪಿಸಲು ಉದ್ದೇಶಿಸಿರುವ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|
| ಇಂಇ 247 ಎನ್‌ಸಿಇ 2002 ದಿನಾಂಕ: 05.3.2002 | ಬೆಳಗಾವಿ ಜಿಲ್ಲೆಯ ಎರಮಲೆ, ಕಣ್ವಿಕರ್ವಿಕಾಪ ಮತ್ತು ಕಮ್ಮಕರಕಟ್ಟೆ ಗ್ರಾಮಗಳಲ್ಲಿ. | 10 |
| ಇಎನ್ 285 ಎನ್‌ಸಿಇ 2005 ದಿನಾಂಕ: 14.10.2005 | ಚಾಮರಾಜನಗರ ಜಿಲ್ಲೆಯ ಹನುಮಪುರ ಮತ್ತು ಚಿಂಚನಹಳ್ಳಿ ಗ್ರಾಮಗಳಲ್ಲಿ. | 18.15 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ವಡ್ರಾಳ್, ಬೀದರಹಳ್ಳಿ ಮತ್ತು ಹತ್ತರವಾರ್ ಗ್ರಾಮಗಳಲ್ಲಿ. | 11.55 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳ ಹತ್ತರವಾರ್, ಹುಲ್ಲಿಕಟ್ಟಿ, ಉಗರಕೋಡ, ಹಿರೇನಂದಿಹಳ್ಳಿ, ಮಲ್ಲಾಪುರ, ಕಿತ್ತೂರು, ಕಲ್ಲಾಪುರ, ಸಿಂಗನಹಳ್ಳಿ, ಹೆಗ್ಗೇರಿ ಗ್ರಾಮಗಳಲ್ಲಿ. | 28.05 |
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಶಿವಮೊಗ್ಗಾ ಜಿಲ್ಲೆಯ ವೇಮಲ್ಯೆಗುಡ್ಡಾ, ಸಿಂಗನಬಿಡಾರೆ, ಕುಲ್ಲುಂಡಿ, ಬಲೆಕಲ್ಲುಗುಡ್ಡಾ ಗ್ರಾಮಗಳಲ್ಲಿ. | 38.28 |

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಅಧ್ಯರ್ಪಿಸಲು ಉದ್ದೇಶಿಸಿರುವ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|
| ಇಎನ್ 319 ಎನ್‌ಸಿಇ 2006 ದಿನಾಂಕ: 16.10.2006 | ಶಿವಮೊಗ್ಗಾ ಮತ್ತು ಚಿಕ್ಕಮಗಳೂರು ಜಿಲ್ಲೆಯ ಹೆದ್ದೂರು, ಗಣಪತಿಕಟ್ಟೆ, ಹಿರೆಕೊಡಗಿ, ಹರಿಹರಪುರ, ಕೊಪ್ಪ, ಅಲಂದೂರು, ಮದಬೂರು ಮತ್ತು ಮುಟ್ಟಿನಕೊಪ್ಪ | 41.25 |
| ಎಲ್ಲಾ ಸೇರಿ ಒಟ್ಟು | | **147.28** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2206**

## ಇಂಧನ ಸಚಿವಾಲಯ

**ವಿಷಯ:** ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 12.6 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 210 ಎನ್‌ಸಿಇ 2005 ದಿನಾಂಕ: 20.8.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 463 ಎನ್‌ಸಿಇ 2006 ದಿನಾಂಕ: 22.12.2006.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/VWTIPL-(6 MW to 21.6 MW)/2011/3011 ದಿನಾಂಕ: 26/28.9.2011 ಮತ್ತು KRED/08/VWTIPL (6 MW to 21.6 MW)/2012/1898 ದಿನಾಂಕ: 05.7.2012.
4. ದಿನಾಂಕ 07.07.2012 ರಂದು ನಡೆದ ಹಂಚಿಕೆ ಸಮಿತಿ ನಡವಳಿ.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನ್.ಇ.ಜಿ. ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಾಗಲಕೋಟೆ, ರಾಯಚೂರು, ಬೀದರ್, ಬಿಜಾಪುರ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ 99.75 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನ್.ಇ.ಜಿ. ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಸೂಚಿಸಿರುವ ಆದೇಶದಲ್ಲಿ ಹಂಚಿಕೆಯಾಗಿರುವ ಸಾಮರ್ಥ್ಯದಲ್ಲಿ ರಾಯಚೂರು ಜಿಲ್ಲೆಯ ಗಾಜಲಗಟ್ಟ, ಕೋಟೆಕಾಲ್ ಗ್ರಾಮಗಳಲ್ಲಿ ಮಂಜೂರಾಗಿರುವ ಅಂಶಿಕ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 21.6 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಮತ್ತು ಸದರಿ ಯೋಜನೆಯನ್ನು ಅರಣ್ಯ, ಕಂದಾಯ ಮತ್ತು ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸಲಾಗುವುದೆಂದು ತಿಳಿಸಿ ದಿನಾಂಕ 28.9.2011ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆನಂತರ 05.7.2012ರ ಪತ್ರದಲ್ಲಿ ಯೋಜನೆಯು ಒಟ್ಟಾರೆ ಜಮೀನಿನಲ್ಲಿ 35.20 ಎಕರೆ ಅರಣ್ಯ ಭೂಮಿಯಲ್ಲಿ 9 ಮೆ.ವ್ಯಾ. ಸಾಮರ್ಥ್ಯ ಹಾಗೂ 32.62 ಎಕರೆ ಸರ್ಕಾರಿ ಜಮೀನಿನಲ್ಲಿ 10.80 ಮೆ.ವ್ಯಾ. ಮತ್ತು 10.66 ಎಕರೆ ಖಾಸಗಿ ಜಮೀನಿನಲ್ಲಿ 1.8 ಮೆ.ವ್ಯಾ. ಸಾಮರ್ಥ್ಯವನ್ನು ಒಳಗೊಂಡಿದ್ದು, ಅರಣ್ಯ ಇಲಾಖೆಯ 35.20 ಎಕರೆ ಜಮೀನಿನಲ್ಲಿ ಬರುವ 9 ಮೆ.ವ್ಯಾ. ಸಾಮರ್ಥ್ಯ ಹೊರತುಪಡಿಸಿ ಖಾಸಗಿ ಮತ್ತು ಸರ್ಕಾರಿ ಜಮೀನಿನಲ್ಲಿ ಬರುವ ಸಾಮರ್ಥ್ಯ ಹೆಚ್ಚಳವನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ :07.07.2012ರಂದು ನಡೆದ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ರವರು ಅರಣ್ಯ ಇಲಾಖೆಯ 35.20 ಎಕರೆ ಜಮೀನಿನಲ್ಲಿ ಬರುವ 9.00 ಮೆ.ವ್ಯಾ. ಸಾಮರ್ಥ್ಯವನ್ನು ಹೊರತು ಪಡಿಸಿ ಕಂದಾಯ ಮತ್ತು ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸಲಿರುವ ಯೋಜನೆಗಳ ಸಾಮರ್ಥ್ಯವನ್ನು 12.6 ಮೆ.ವ್ಯಾ.ಗೆ ಹೆಚ್ಚಿಸಲು ಸಮಿತಿಯು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 387 ಎನ್‌ಸಿಇ 2011, ಬೆಂಗಳೂರು, ದಿನಾಂಕ: 08.08.2012.**

ಮೆ:: ವೆಸ್ಟಾಸ್ ವಿಂಡ್ ಟೆಕ್ನಾಲಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಜಿಲ್ಲೆಯ ಗಾಜಲಗಟ್ಟ ಮತ್ತು ಕೋಟೆಕಾಲ್ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು **12.6 ಮೆಗಾ ವ್ಯಾಟ್** ಸಾಮರ್ಥ್ಯಕ್ಕೆ (ಅರಣ್ಯ ಇಲಾಖೆಯ 35.20 ಎಕರೆ ಜಮೀನಿನಲ್ಲಿ ಬರುವ 9.00 ಮೆ.ವ್ಯಾ. ಸಾಮರ್ಥ್ಯವನ್ನು ಹೊರತು ಪಡಿಸಿ, 32.62 ಎಕರೆ ಸರ್ಕಾರಿ ಜಮೀನಿನಲ್ಲಿ

ಅನುಷ್ಠಾನಗೊಳಿಸಲಿರುವ 10.80 ಮೆ.ವ್ಯಾ. ಸಾಮರ್ಥ್ಯ ಮತ್ತು 10.66 ಎಕರೆ ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸಲಿರುವ 1.8 ಮೆ.ವ್ಯಾ. ಸಾಮರ್ಥ್ಯ) ಈ ಕೆಳಗೆ ವಿವರಿಸಿರುವಂತೆ ಮತ್ತು ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಿ ಆದೇಶಿಸಿದೆ.**

| Sl No. | WTG No. | District | Taluk | Village | Survey No. | Extent (Acres) |
|---|---|---|---|---|---|---|
| | | | **REVENUE LAND** | | | |
| 1 | P30 | Raichur | Manvi | Yatgal | 49 | 5.81 |
| 2 | P29 | Raichur | Manvi | Yatgal | 25/2 | 4.99 |
| 3 | P24, P25, P26 | Raichur | Manvi | Yatgal | 25/1 | 16.06 |
| 4 | P28 | Raichur | Lingsugur | Gajalagatti | 36 | 5.76 |
| | **TOTAL** | | | | | **32.62** |
| | | | **PRIVATE LAND** | | | |
| 1 | P27 | Raichur | Manvi | Kutekal | 113 | 4.33 |
| 2 | | | | Yatgal | 85 | 1.30 |
| 3 | | | | Gajalagatti | 29 | 0.72 |
| 4 | | | | Kutekal | 122 | 0.63 |
| 5 | | | | Kutekal | 123 | 1.39 |
| 6 | | | | Yatgal | 74 | 0.49 |
| 7 | | | | Kutekal | 8(2) | 0.03 |
| 8 | | | | Kutekal | 8(1) | 0.46 |
| 9 | | | | Kutekal | 114 | 1.04 |
| 10 | | | | Kutekal | 9(1) | 0.05 |
| 11 | | | | Kutekal | 11 | 0.24 |
| | **TOTAL** | | | | | **10.66** |

1. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
2. ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಯನ್ನು ಒಂದು ವರ್ಷದಲ್ಲಿ ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ತ್ರಿಪ್ರತಿಗಳಲ್ಲಿ ಸಲ್ಲಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ** |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಶಾಸನಬದ್ಧ ಅನುಮೋದನೆ ಅವಶ್ಯಕತೆ ಇರುವ ಇಲಾಖೆ/ನಿಗಮಗಳಿಂದ ಅಂದರೆ ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಕಂದಾಯ ಇಲಾಖೆ ಮತ್ತು ಇತರೆ ಸಂಬಂಧಿಸಿದ ಇಲಾಖೆಗಳ ಕ್ಲಿಯರೆನ್ಸ್‌ಗಳನ್ನು ಈ ಹೆಚ್ಚುವರಿ ಸಾಮರ್ಥ್ಯಕ್ಕೂ ಸಹ ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
8. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR. 2264**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** :– ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿರುವ ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ** :– 1) ಆಯುಕ್ತರ ಪತ್ರ ಸಂಖ್ಯೆ: ಜೆಡಿ (ಎಂ) ಎಂಡಿಪಿ/ 5/ 2011–12, ದಿನಾಂಕ: 25–7–2011.

2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಸಮಿತಿಯು ನೀಡಿದ ವರದಿ.

3) ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ನವ ದೆಹಲಿ ಇವರ ಪತ್ರ ಸಂಖ್ಯೆ: U.12012/34 / 2012–ME(P-II), ದಿನಾಂಕ: 08–6–2012 ಮತ್ತು ದಿನಾಂಕ: 28–6–2012.

4) ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 11–5–2012 ರಂದು ನಡೆದ ಸಭೆಯ ನಡವಳಿಗಳು

2004ನೇ ಸಾಲಿನಲ್ಲಿ ಸರ್ಕಾರವು ರಾಜ್ಯದಲ್ಲಿ ಆರು ಹೊಸ ವೈದ್ಯಕೀಯ ವಿಜ್ಞಾನ ಮಹಾವಿದ್ಯಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು. ಈ ಮಹಾವಿದ್ಯಾಲಯಗಳ ವಿದ್ಯಾರ್ಥಿಗಳಿಗೆ ಕ್ಲಿನಿಕಲ್ ಸೌಲಭ್ಯದ ಅವಶ್ಯಕತೆ ಇದ್ದುದರಿಂದ ಅಲ್ಲಿ ಜಿಲ್ಲಾ ಆಸ್ಪತ್ರೆಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಗೆ ಹಸ್ತಾಂತರಿಸುವಂತೆ ಕೋರಿದ್ದರ ಹಿನ್ನಲೆಯಲ್ಲಿ ಮಂಡ್ಯ, ಹಾಸನ, ಶಿವಮೊಗ್ಗ, ರಾಯಚೂರು, ಬೀದರ್ ಮತ್ತು ಬೆಳಗಾವಿ ಜಿಲ್ಲಾ ಆಸ್ಪತ್ರೆಗಳಲ್ಲಿನ ಟೀಚಿಂಗ್(Teaching) ವಿಭಾಗದ ನಿಯಂತ್ರಣವನ್ನು ಮಾತ್ರ ಈ ಮಹಾವಿದ್ಯಾಲಯಗಳು ಹೊಂದಲು ಹಾಗೂ ಆಸ್ಪತ್ರೆಗಳ ಕ್ಲಿನಿಕಲ್ ಮತ್ತು ಆಡಳಿತಾತ್ಮಕ ವಿಭಾಗಗಳ ನಿಯಂತ್ರಣವನ್ನು ಅಕುಕ ಇಲಾಖೆಯಲ್ಲಿಯೇ ಮುಂದುವರೆಸಲು ದಿ.29.12.2006ರಲ್ಲಿ ಆದೇಶಿಸಲಾಗಿತ್ತು. ಇದಕ್ಕಿಂತ ಮುಂಚಿತವಾಗಿ ಖಾಸಗಿ ಕಾಲೇಜುಗಳ ಕ್ಲಿನಿಕಲ್ ಸೌಲಭ್ಯಕ್ಕಾಗಿ ದಕ್ಷಿಣ ಕನ್ನಡ ಜಿಲ್ಲೆಯ ವೆನ್‌ಲಾಕ್ ಮತ್ತು ದಾವಣಗೆರೆಯ ಚಿಗಟೇರಿ ಜಿಲ್ಲೆ ಆಸ್ಪತೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಗೆ ನೀಡಲಾಗಿತ್ತು.

ಕರ್ನಾಟಕ ಸರ್ಕಾರಿ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು ಇವರು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಿಗೆ ಸಲ್ಲಿಸಿದ್ದ ಮನವಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದಂತೆ ಹಲವಾರು ರಾಷ್ಟ್ರೀಯ ಮತ್ತು ರಾಜ್ಯದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದೆ. ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಜಿಲ್ಲಾ ಆಸ್ಪತ್ರೆಗಳ ಶಸ್ತ್ರಚಿಕಿತ್ಸಕರು, ಅಲ್ಲಿನ ಸಿಬ್ಬಂದಿ ಪ್ರಮುಖ ಪಾತ್ರವನ್ನು ವಹಿಸಬೇಕಾಗುತ್ತದೆ. 10 ಜಿಲ್ಲಾ ಆಸ್ಪತ್ರೆಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಿದ ನಂತರ ಅಯಾ ಜಿಲ್ಲೆಗಳಲ್ಲಿ ಇಲಾಖೆಯ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ರಾಷ್ಟ್ರೀಯ ಮತ್ತು ರಾಜ್ಯದ ಕಾರ್ಯಕ್ರಮಗಳ ಪ್ರಗತಿ ಕುಂಠಿತಗೊಂಡಿರುತ್ತದೆ. ಆದುದರಿಂದ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬಿಟ್ಟುಕೊಡಲಾಗಿದ್ದ ಆಸ್ಪತ್ರೆಗಳಲ್ಲಿ ವೈದಕೀಯ ಕಾಲೇಜುಗಳಿಗೆ ಕ್ಲಿನಿಕಲ್ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿ ಆ ಜಿಲ್ಲಾ ಆಸ್ಪತ್ರೆಗಳನ್ನು ಆಕುಕ ಇಲಾಖೆಗೆ ಹಿಂದುರಿಗಿಸಿದಲ್ಲಿ ಇಲಾಖೆಯ ಕಾರ್ಯಕ್ರಮಗಳನ್ನು ಉತ್ತಮ ಮಟ್ಟದಲ್ಲಿ ಅನಷ್ಠಾನಗೊಳಿಸಲು ಸಹಕಾರಿಯಾಗುತ್ತದೆ. ಈ ಆಧಾರದ ಮೇಲೆ ವೈದ್ಯಕೀಯ ಶಿಕ್ಷಣ ಅಧೀನದಲ್ಲಿ ಇರುವ ಜಿಲ್ಲಾ ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನಕ್ಕೆ ಪಡೆಯಲು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ಪ್ರಸ್ತಾಪಿಸಿರುತ್ತಾರೆ.

ಕರ್ನಾಟಕ ರಾಜ್ಯ ಸರ್ಕಾರಿ ವೈದ್ಯಾಧಿಕಾರಿಗಳ ಸಂಘದ ಬೇಡಿಕೆಗಳಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಗೆ ಬಿಟ್ಟುಕೊಡಲಾಗಿದ್ದ 10 ಜಿಲ್ಲಾ ಆಸ್ಪತ್ರೆಗಳನ್ನು ಮತ್ತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ತರುವ ವಿಷಯವು ಸಹ ಒಳಗೊಂಡಿದ್ದು, ಇವರ ಬೇಡಿಕೆಗಳ ಕುರಿತು ಪರಿಶೀಲಿಸಿ, ವರದಿ ಸಲ್ಲಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯು, ರಾಜ್ಯದಲ್ಲಿನ ಸರ್ಕಾರಿ ವೈದ್ಯಕೀಯ ವಿಜ್ಞಾನ ಕಾಲೇಜುಗಳಿಗೆ ಧಕ್ಕೆ ಬರುವುದಿಲ್ಲವೆಂಬ ಅಂಶವನ್ನು ಕೇಂದ್ರ ಸರ್ಕಾರದಿಂದ ದೃಢೀಕರಿಸಿಕೊಳ್ಳುವ ಷರತ್ತಿಗೆ ಒಳಪಟ್ಟು ಪ್ರಸ್ತುತ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿ ಕಾರ್ಯನಿರ್ವಹಿಸುತ್ತಿರುವ ಒಟ್ಟು 10 ಜಿಲ್ಲಾ ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಮತ್ತೆ ತರುವಂತೆ ಮೇಲೆ ಓದಲಾದ ಕ್ರಮಾಂಕ(2) ರಲ್ಲಿನ ಸಮಿತಿಯ ವರದಿಯಲ್ಲಿ ತಿಳಿಸಲಾಗಿದೆ.

ಈ ಹಿನ್ನಲೆಯಲ್ಲಿ, ಭಾರತೀಯ ವೈದ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಕೇಂದ್ರ ಸರ್ಕಾರದ ಆರೋಗ್ಯ ಮಂತ್ರಾಲಯದ ಕಾರ್ಯದರ್ಶಿಯವರಿಗೆ ರಾಜ್ಯ ಸರ್ಕಾರವು ಪತ್ರಗಳನ್ನು ಬರೆದು ಸ್ಪಷ್ಟೀಕರಣ ಕೋರಲಾಗಿತ್ತು. ಇದಕ್ಕೆ ಉತ್ತರವಾಗಿ, ವೈದ್ಯಕೀಯ ಕಾಲೇಜುಗಳನ್ನು ಹೊಂದಿಕೊಂಡಂತೆ ಇರುವ ಆಸ್ಪತ್ರೆಗಳು ರಾಜ್ಯ ಸರ್ಕಾರದ ನಿಯಂತ್ರಣಕ್ಕೆ ಒಳಪಡುತ್ತಿದ್ದು, ಸದರಿ ಆಸ್ಪತ್ರೆಗಳ ಮಾಲಿಕತ್ವ / ಆಡಳಿತ ವ್ಯಾಪ್ತಿಯನ್ನು ಬದಲಾಯಿಸುವುದರಿಂದ ವೈದ್ಯಕೀಯ ಕಾಲೇಜುಗಳ Intake ಹೆಚ್ಚುಕಡಿಮೆ ಆಗುವುದಕ್ಕೆ ಪರಿಣಾಮ ಬೀರುವುದಿಲ್ಲ. ಆದ್ದರಿಂದ, ರಾಜ್ಯ ಸರ್ಕಾರ ವೈದ್ಯಕೀಯ ಕಾಲೇಜುಗಳಿಗೆ ಹೊಂದಿಕೊಂಡಂತೆ ಇರುವ ಆಸ್ಪತ್ರೆಗಳ ಆಡಳಿತ ನಿಯಂತ್ರಣ / ಆಡಳಿತವನ್ನು ಒಂದು ಇಲಾಖೆಯಿಂದ ಇನ್ನೊಂದು ಇಲಾಖೆಗೆ ಬದಲಾಯಿಸಲು ಅಭ್ಯಂತರವಿಲ್ಲವೆಂದು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಪತ್ರಗಳಲ್ಲಿ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯವು ಅಭಿಪ್ರಾಯ ನೀಡಿರುತ್ತದೆ.

ಈ ಹಿನ್ನಲೆಯಲ್ಲಿ, ದಿನಾಂಕ: 14–8–2012 ರಂದು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕರ್ನಾಟಕ ಸರ್ಕಾರಿ ವೈದ್ಯಾಧಿಕಾರಿಗಳ ಸಂಘದ ಬೇಡಿಕೆಯಾದ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ತರುವ ಬಗ್ಗೆ ಅಂತಿಮವಾಗಿ ಚರ್ಚಿಸಲಾಗಿದ್ದು, ಸದರಿ ಸಭೆಯಲ್ಲಿ ಈ ಕೆಳಕಂಡಂತೆ ತೀರ್ಮಾನ ತೆಗೆದುಕೊಳ್ಳಲಾಗಿದೆ:

> " ದಕ್ಷಿಣ ಕನ್ನಡ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಸರ್ಕಾರದ ವತಿಯಿಂದ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸದೇ ಇರುವ ಹಿನ್ನಲೆಯಲ್ಲಿ ಮಂಗಳೂರಿನ ವೆನ್‌ಲಾಕ್ ಆಸ್ಪತ್ರೆ (ಲೇಡಿ ಘೋಷಾನ್ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ ಸೇರಿದಂತೆ) ಹಾಗು ದಾವಣಗೆರೆಯ ಚಿಗಟೇರಿ ಜಿಲ್ಲಾ ಆಸ್ಪತ್ರೆ (ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ ಸೇರಿದಂತೆ) ಇವುಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ವಹಿಸಲು;
>
> 2) ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿ ಇರುವ ಉಳಿದ ಜಿಲ್ಲಾ ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ತರುವ ಕುರಿತಂತೆ ಕೂಲಂಕಷವಾಗಿ ಪರಿಶೀಲಿಸಿ, ವರದಿ ನೀಡಲು ಮಾನ್ಯ ಉಪ ಮುಖ್ಯ ಮಂತ್ರಿ (ಗೃಹ ಮತ್ತು ಸಾರಿಗೆ) ರವರ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟದ ಉಪ ಸಮಿತಿಯೊಂದನ್ನು ರಚಿಸಲು; "
>
> ಸರ್ಕಾರವು ಈ ವಿಷಯದ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಸಿಜಿಎಂ 2012, ಬೆಂಗಳೂರು, ದಿನಾಂಕ: 02–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ವೆನ್‌ಲಾಕ್ ಆಸ್ಪತ್ರೆ (ಲೇಡಿ ಘೋಷಾನ್ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ ಸೇರಿದಂತೆ) ಮತ್ತು ದಾವಣಗೆರೆಯ ಚಿಗಟೇರಿ ಜಿಲ್ಲಾ ಆಸ್ಪತ್ರೆ (ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ ಸೇರಿದಂತೆ) ಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಈ ಕೂಡಲೇ ಜಾರಿಗೆ ಬರುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಶಕ್ಕೆ ಹಿಂಪಡೆಯಲಾಗಿದೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ರವರು ಸದರಿ ಆಸ್ಪತ್ರೆಗಳಿಗೆ 2013–14 ನೇ ಸಾಲಿನಿಂದ ಅಗತ್ಯವಿರುವ ಅನುದಾನವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೆಚ್ಚದಲ್ಲಿ ಕಲ್ಪಿಸಿಕೊಳ್ಳಲು ಅಗತ್ಯ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR.2181**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:–** ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದಿಂದ ಆಯುರ್ವೇದ ಪದ್ಧತಿಯಲ್ಲಿ ಸ್ನಾತಕೋತ್ತರ ಪದವಿ ಕೋರ್ಸಿಗೆ ಆಯ್ಕೆಗೊಂಡಿರುವ ವೈದ್ಯರು ದರ್ಜೆ–2 (ಅ) ಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಷ್/77/ಸಿಬ್ಬಂದಿ(4)/2012–13 ದಿನಾಂಕ:16–11–2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಆಯುಷ್ ನಿರ್ದೇಶಕರು, ಬೆಂಗಳೂರು ಇವರು ಈ ಕೆಳಗಿನ ವೈದ್ಯರು ದರ್ಜೆ–2 ಇವರುಗಳು 2012–13ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೊತ್ತರ ಪದವಿ ಕೋರ್ಸಿಗೆ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದಿಂದ ಆಯ್ಕೆಗೊಂಡಿದ್ದು, ಅವರುಗಳನ್ನು ಉನ್ನತ ವ್ಯಾಸಂಗಕ್ಕೆ ನಿಯೋಜಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

| ಕ್ರ. ಸಂ. | ಹೆಸರು / ಕಾರ್ಯನಿರ್ವಹಿಸುತ್ತಿರುವ ಸ್ಥಳ | ಆಯ್ಕೆಗೊಂಡ ಸ್ನಾತಕೋತ್ತರ ಪದವಿಯ ವಿಷಯ ತಜ್ಞತೆ | ನಿಯೋಜಿಸಬೇಕಿರುವ ಮಹಾವಿದ್ಯಾಲಯದ ಹೆಸರು |
|---|---|---|---|
| 1 | ಡಾ:ನಾಗಪದ್ಮ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ತಗ್ಗಹಳ್ಳಿ, ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ. | ಪಂಚಕರ್ಮ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 2 | ಡಾ:ಭಾರತಿ ಬಿ. ಹಿರೇಮಠ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ನೇರಳೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. | ಆಯುರ್ವೇದ ಸಿದ್ಧಾಂತ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು. |

| | | | |
|---|---|---|---|
| 3 | ಡಾ:ಕೋಮಲ.ವಿ.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಕಿರಗುಂದ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. | ಶಾಲಾಕ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 4 | ಡಾ:ಟಿ. ಶಶಿಕಲಾ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಅಂಬ್ಲಿಕಲ್,<br>ಮುಳುಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ. | ಶಾಲಾಕ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 5 | ಡಾ:ಸಂಜಯ ಎಂ.ಎನ್.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಕಂಪಾರಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ದ್ರವ್ಯಗುಣ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 6 | ಡಾ:ರಾಕೇಶ್ ಎಸ್.ಆರ್.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಕೊನೇಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ಶಲ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 7 | ಡಾ:ಭಾರತಿ ಕೆ. ಬಡಕರೆಪ್ಪನವರ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಮೋಟೆಬೆನ್ನೂರು,<br>ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ. | ಪಂಚಕರ್ಮ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 8 | ಡಾ:ರಾಘವೇಂದ್ರ ಶೆಟ್ಟಿಗಾರ್<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ವೃಂದಾವನಹಳ್ಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. | ಶಲ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 9 | ಡಾ:ರಿಯಾಜ ಅಹಮ್ಮದ್ ಹೆಚ್.ಸುಳ್ಳದ<br>ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಕುಷ್ಠಗಿ, ಕೊಪ್ಪಳ ಜಿಲ್ಲೆ. | ರೆಪರ್ಟರಿ<br>(Repertory) | ಹೆಚ್.ಕೆ.ಇ.ಎಸ್. ಹೋಮಿಯೋಪತಿ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ, ಗುಲ್ಬರ್ಗಾ. |

ಮುಂದುವರೆದು, ಸದರಿ ವೈದ್ಯರುಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 61 ರ ಅಪೆಂಡಿಕ್ಸ್ 2 (ಎ) (1) ರನ್ವಯ ನಿಗಧಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿದ್ದು, ಇವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದೂ ಹಾಗೂ ಇವರುಗಳ ಸೇವೆಯು ತೃಪ್ತಿಕರವಾಗಿದೆ ಎಂದು ತಿಳಿಸುತ್ತಾ, ಸದರಿ ವೈದ್ಯರುಗಳನ್ನು ಮೂರು ವರ್ಷಗಳ ಅವಧಿಯ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 512 ಪಿಐಎಂ 2012, ಬೆಂಗಳೂರು, ದಿನಾಂಕ:21–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಗಿನ ವೈದ್ಯರುಗಳನ್ನು ಅವರುಗಳ ಮುಂದೆ ನಮೂದಿಸಲಾದ ವಿಷಯ ತಜ್ಞತೆಯಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 61 ರ ಅಪೆಂಡಿಕ್ಸ್ 2 (ಎ) ನ ನಿಯಮ 1 ರ ಉಪ ನಿಯಮದನ್ವಯ ಸೂಚಿಸಿರುವ ಷರತ್ತುಗಳು ಹಾಗೂ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಡಿಸಿ ಹಾಗೂ ಕ್ರ.ಸಂ. 1ರಿಂದ 8ರವರೆಗಿನ ವೈದ್ಯರುಗಳು ಅವರ ವೇತನವನ್ನು ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು/ಮೈಸೂರಿನಲ್ಲಿ ಪಡೆಯಲು ಹಾಗೂ ಕ್ರ.ಸಂ. 9ರಲ್ಲಿನ ವೈದ್ಯರು ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಕುಷ್ಟಗಿ, ಕೊಪ್ಪಳ ಜಿಲ್ಲೆಯಲ್ಲಿ ಪಡೆಯುವುದರೊಂದಿಗೆ ಮೂರು ವರ್ಷಗಳ ಅವಧಿಯ ವ್ಯಾಸಂಗಕ್ಕಾಗಿ ಅವರುಗಳ ಮುಂದೆ ನಮೂದಿಸಿರುವ ಮಹಾವಿದ್ಯಾಲಯಕ್ಕೆ ನಿಯೋಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ. ಸಂ. | ಹೆಸರು / ಕಾರ್ಯನಿರ್ವಹಿಸುತ್ತಿರುವ ಸ್ಥಳ | ಆಯ್ಕೆಗೊಂಡ ಸ್ನಾತಕೋತ್ತರ ಪದವಿಯ ವಿಷಯ ತಜ್ಞತೆ | ನಿಯೋಜಿಸಬೇಕಿರುವ ಮಹಾವಿದ್ಯಾಲಯದ ಹೆಸರು |
|---|---|---|---|
| 1 | ಡಾ:ನಾಗಪದ್ಮ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ತಗ್ಗಹಳ್ಳಿ,ಮದ್ದೂರು ತಾ: ಮಂಡ್ಯ ಜಿ | ಪಂಚಕರ್ಮ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 2 | ಡಾ:ಭಾರತಿ ಬಿ. ಹಿರೇಮಠ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ನೇರಳೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. | ಆಯುರ್ವೇದ ಸಿದ್ಧಾಂತ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು. |
| 3 | ಡಾ:ಕೋಮಲ.ವಿ.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಕಿರಗುಂದ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. | ಶಾಲಾಕ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |

| | | | |
|---|---|---|---|
| 4 | ಡಾ:ಟಿ. ಶಶಿಕಲಾ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಅಂಬ್ಲಿಕಲ್, ಮುಳುಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ. | ಶಾಲಾಕ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 5 | ಡಾ:ಸಂಜಯ ಎಂ.ಎನ್.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಕಂಪಾರಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ದ್ರವ್ಯಗುಣ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 6 | ಡಾ:ರಾಕೇಶ್ ಎಸ್.ಆರ್.<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಕೊನೇಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ಶಲ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 7 | ಡಾ:ಭಾರತಿ ಕೆ. ಬಡಕರೆಪ್ಪನವರ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ,<br>ಮೋಟೆಬೆನ್ನೂರು, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ. | ಪಂಚಕರ್ಮ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 8 | ಡಾ:ರಾಘವೇಂದ್ರ ಶೆಟ್ಟಿಗಾರ್<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ವೃಂದಾವನಹಳ್ಳಿ,<br>ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. | ಶಲ್ಯತಂತ್ರ | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು. |
| 9 | ಡಾ:ರಿಯಾಜ ಅಹಮ್ಮದ್ ಹೆಚ್.ಸುಳ್ಳದ ಸರ್ಕಾರಿ<br>ಹೋಮಿಯೋಪತಿ ಚಿಕಿತ್ಸಾಲಯ, ಕುಷ್ಟಗಿ, ಕೊಪ್ಪಳ ಜಿಲ್ಲೆ. | ರೆಪೆರ್‌ಟರಿ<br>(Repertory) | ಹೆಚ್.ಕೆ.ಇ.ಎಸ್ ಹೋಮಿಯೋಪತಿ ಮೆಡಿಕಲ್‌ಕಾಲೇಜು ಮತ್ತು ಆಸ್ಪತ್ರೆ, ಗುಲ್ಬರ್ಗಾ. |

**ಷರತ್ತುಗಳು:–**

1) ಅವರುಗಳ ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.

2) ಅವರುಗಳ ವಿದ್ಯಾಭ್ಯಾಸದ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 8(15)(ಸಿ) ರೀತ್ಯಾ ಕೆಲಸದ ಮೇಲಿದ್ದ ಅವಧಿಯೆಂದು ಪರಿಗಣಿಸುವುದು.

3) ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲ–ಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ) ಮುಂದುವರೆಸುವುದು.

4) ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ–19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು ಹಾಗೂ ಸ್ನಾತಕೋತ್ತರ ವ್ಯಾಸಂಗ ಮುಗಿದ ನಂತರ ಇಲಾಖೆಯಲ್ಲಿ 10 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ಒಪ್ಪಿಗೆ ಪತ್ರದಲ್ಲಿ ನಿಯಮಾನುಸಾರ ಎಲ್ಲಾ ಷರತ್ತುಗಳನ್ನು ನಮೂದಿಸುವುದು.

5) ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.

6) ಉನ್ನತ ಶಿಕ್ಷಣಕ್ಕೆ ಪ್ರತಿನಿಯೋಜಿಸಲ್ಪಡುವ ವೈದ್ಯರುಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ತಿಳಿಸಿರುವ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.

7) ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿನಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.

8) ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.

9) ಕರ್ನಾಟಕ ನಾಗರಿಕ ಸೇವಾ ನಿಯಮಗಳ ಅಪೆಂಡಿಕ್ಸ್–I 'ಎ' ನಿಯಮ 1ರ ಉಪನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.

10) ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ಸದರಿ ನಿಯೋಜನೆಗೆ ತಗುಲಿರುವ ಪೂರ್ಣ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಆಇ 02 ಎಸ್‌ಆರ್‌ಎ 2008, ದಿನಾಂಕ:05–06–2008ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್. ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

PR.2202

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಔಷಧ ನಿಯಂತ್ರಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳನ್ನು ಲೋಕಾಯುಕ್ತ ಪೊಲೀಸರು ಟ್ರ್ಯಾಪ್ ಮಾಡಿರುವ ಪ್ರಯುಕ್ತ ಸಂಬಂಧಿಸಿದವರನ್ನು ಅಮಾನತ್ತುಗೊಳಿಸಿರುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರ ಪತ್ರ ಸಂಖ್ಯೆ:ಔನಿಇ 692 ಸಿಬ್ಬಂದಿ 2012–13 ದಿನಾಂಕ 07–12–2012 ಹಾಗೂ 10–12–2012.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 07–12–2012ರ ಪತ್ರದಲ್ಲಿ ಶ್ರೀ ಸಿ.ಕುಮಾರ್, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಮತ್ತು ಶ್ರೀಮತಿ ವಿ.ವಿಶಾಲಾಕ್ಷಿ ಔಷಧ ಪರಿವೀಕ್ಷಕರು, ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬೆಂಗಳೂರು ವೃತ್ತ–6 ಇವರನ್ನು ಲೋಕಾಯುಕ್ತ ಪೊಲೀಸರು ದಿನಾಂಕ 05–12–2012ರಂದು ಟ್ರ್ಯಾಪ್ ಮಾಡಿದ್ದು, ಈಗಾಗಲೇ ಸಂಖ್ಯೆ:86/2012ರಲ್ಲಿ ಪ್ರಕರಣ ದಾಖಲಿಸಿರುವುದಾಗಿ ಔಷಧ ನಿಯಂತ್ರಕರು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಮುಂದುವರೆದು, ಮೇಲೆ ಓದಲಾದ ಸಮಸಂಖ್ಯೆಯ ದಿನಾಂಕ 10–12–2012ರ ಪತ್ರದಲ್ಲಿ ಟ್ರ್ಯಾಪ್ ಆದ ಈ ಇಬ್ಬರು ಅಧಿಕಾರಿಗಳು ಇದುವರೆವಿಗೂ ನ್ಯಾಯಾಂಗ ಬಂಧನದಲ್ಲಿರುವುದಾಗಿ ತಿಳಿಸುತ್ತಾ, ಇದೇ ವಿಷಯವಾಗಿ ದಿನಾಂಕ 07–12–2012ರಂದು ಟಿವಿ9 ಕನ್ನಡ ದೂರದರ್ಶನ ವಾಹಿನಿಯು ನಡೆಸಿದ ರಹಸ್ಯ ಕಾರ್ಯಾಚರಣೆಯಲ್ಲಿ ಚಿತ್ರಿತಗೊಂಡು **"ಯಮದೂತರ ಕೈಯಲ್ಲಿ ಸಂಜೀವಿನಿ"** ಎಂಬ ಶೀರ್ಷಿಕೆಯಡಿ ಪ್ರಸಾರವಾದ ಕಾರ್ಯಕ್ರಮದಲ್ಲಿ ಒಳಗೊಂಡ ಔಷಧ ಪರೀಕ್ಷಾ ಪ್ರಯೋಗಾಲಯದ ಜ್ಯೂನಿಯರ್ ಸೈಂಟಿಫಿಕ್ ಆಫೀಸರಾದ ಶ್ರೀ ನೀಲಕಂಠ, ಪ್ರಾಣಿ ಗೃಹ ಪರ್ಯವೇಕ್ಷಕರಾದ ಶ್ರೀ ಪರಮೇಶ್ವರಪ್ಪ, ಮತ್ತು ಕೇಂದ್ರ ಕಛೇರಿಯಲ್ಲಿ ಹಾಗೂ ಭಾಗಶಃ ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಕೆ.ಎಲ್.ಸತೀಶಕುಮಾರ್ ಇವರುಗಳು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುವುದಾಗಿ ತಿಳಿಸುತ್ತಾ, ಇವರುಗಳನ್ನು ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸುವಂತೆ ಔಷಧ ನಿಯಂತ್ರಕರು ಕೋರಿರುತ್ತಾರೆ.

ಸರ್ಕಾರವು ಔಷಧ ನಿಯಂತ್ರಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಸಿ.ಕುಮಾರ್, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಮತ್ತು ಶ್ರೀಮತಿ ವಿ.ವಿಶಾಲಾಕ್ಷಿ ಔಷಧ ಪರಿವೀಕ್ಷಕರು, ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬೆಂಗಳೂರು ವೃತ್ತ–6 ಇವರುಗಳು 48 ಗಂಟೆಗಳಿಗಿಂತಲೂ ಹೆಚ್ಚು ಕಾಲ ನ್ಯಾಯಾಂಗ ಬಂಧನದಲ್ಲಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(2)(ಎ)ರನ್ವಯ ಹಾಗೂ ಔಷಧ ಪರೀಕ್ಷಾ ಪ್ರಯೋಗಾಲಯದ ಜ್ಯೂನಿಯರ್ ಸೈಂಟಿಫಿಕ್ ಆಫೀಸರಾದ ಶ್ರೀ ನೀಲಕಂಠ, ಪ್ರಾಣಿ ಗೃಹ ಪರ್ಯವೇಕ್ಷಕರಾದ ಶ್ರೀ ಪರಮೇಶ್ವರಪ್ಪ, ಮತ್ತು ಕೇಂದ್ರ ಕಛೇರಿಯಲ್ಲಿ ಹಾಗೂ ಭಾಗಶಃ ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಕೆ.ಎಲ್.ಸತೀಶಕುಮಾರ್ ಇವರುಗಳು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುವುದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(3)ರನ್ವಯ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಇವರುಗಳನ್ನು ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಲು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 251 ಐಎಂಎಂ 2012, ಬೆಂಗಳೂರು, ದಿನಾಂಕ 11–12–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ (1) **ಶ್ರೀ ಸಿ. ಕುಮಾರ್**, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಮತ್ತು (2) **ಶ್ರೀಮತಿ ವಿ.ವಿಶಾಲಾಕ್ಷಿ**, ಔಷಧ ಪರಿವೀಕ್ಷಕರು, ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬೆಂಗಳೂರು ವೃತ್ತ–6, ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(2)(ಎ)ರನ್ವಯ, ಬಂಧನಕ್ಕೆ ಒಳಗಾದ ದಿನಾಂಕ 05–12–2012 ರಿಂದಲೇ ಜಾರಿಗೆ ಬರುವಂತೆ ಹಾಗೂ ಔಷಧ ಪರೀಕ್ಷಾ ಪ್ರಯೋಗಾಲಯದ ಜ್ಯೂನಿಯರ್ ಸೈಂಟಿಫಿಕ್ ಆಫೀಸರಾದ (3) **ಶ್ರೀ ನೀಲಕಂಠ,** ಪ್ರಾಣಿ ಗೃಹ ಪರ್ಯವೇಕ್ಷಕರಾದ (4) **ಶ್ರೀ ಪರಮೇಶ್ವರಪ್ಪ,** ಮತ್ತು ಕೇಂದ್ರ ಕಛೇರಿಯಲ್ಲಿ ಹಾಗೂ ಭಾಗಶಃ ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ–6 ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕರಾದ (5) **ಶ್ರೀ ಕೆ.ಎಲ್.ಸತೀಶಕುಮಾರ್**, ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(3)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಅವರುಗಳ ವಿರುದ್ಧ ಇರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿ ಮತ್ತು ನೌಕರರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಇವರುಗಳು ತಮ್ಮ ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು, ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್. ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**PR.2250**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಇಲಾಖಾ ಮುಂಬಡ್ತಿ ಸಮಿತಿ (ಡಿಪಿಸಿ)ಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂ:ಆಕುಕ 460 ಪಿಐಎಂ 2010 ದಿನಾಂಕ:23.12.2010.
2. ಸರ್ಕಾರದ ಆದೇಶ ಸಂ:ಸಿಆಸುಇ 18 ಸೆನೆನಿ 2011 ದಿನಾಂಕ:29.08.2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1)ರಲ್ಲಿನ ಸರ್ಕಾರಿ ಆದೇಶದಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನದಲ್ಲಿ ಬರುವ ಔಷಧ ನಿಯಂತ್ರಣ ಇಲಾಖೆ ಹಾಗೂ ಆಯುಷ್ ಇಲಾಖೆಯ "ಎ" ವೃಂದದ ಕಿರಿಯ ಶ್ರೇಣಿ ಅಧಿಕಾರಿ ಹುದ್ದೆಗಳಿಗೆ ಪದೋನ್ನತಿ ನೀಡಲು ರಚಿತವಾದ, ಇಲಾಖಾ ಮುಂಬಡ್ತಿ ಸಮಿತಿ ಸಭೆಗೆ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರನ್ನಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಸಹ ಕಾರ್ಯದರ್ಶಿಗಳಾದ ಶ್ರೀ ಎಂ.ಎಸ್.ಸ್ವಾಮಿ, ಇವರನ್ನು ನೇಮಿಸಲಾಗಿತ್ತು. ಆದರೆ ಸದರಿ ಅಧಿಕಾರಿಯವರು ವರ್ಗಾವಣೆಯಾದ ಹಿನ್ನೆಲೆಯಲ್ಲಿ, ಅವರ ಸ್ಥಳಕ್ಕೆ ಮೇಲೆ ಕ್ರಮಸಂಖ್ಯೆ(2)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಆಯುಷ್ ಇಲಾಖೆಯ ಕೇಂದ್ರೀಯ ಔಷಧಾಗಾರ, ಬೆಂಗಳೂರು ಇಲ್ಲಿ ಉಪನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ:ಎಂ.ಎ.ದಾಸರ ಇವರನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 547 ಪಿಐಎಂ 2012, ಬೆಂಗಳೂರು, ದಿನಾಂಕ:04-12-2012**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಡಾ॥ಎಂ.ಎ.ದಾಸರ, ಉಪನಿರ್ದೇಶಕರು, ಕೇಂದ್ರೀಯ ಔಷಧಾಗಾರ ಆಯುಷ್ ಇಲಾಖೆ, ಬೆಂಗಳೂರು, ಇವರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಔಷಧ ನಿಯಂತ್ರಣ ಇಲಾಖೆ ಹಾಗೂ ಆಯುಷ್ ಇಲಾಖೆಗೆ ಸಂಬಂಧಿಸಿದಂತೆ "ಎ" ವೃಂದದ ಕಿರಿಯ ಅಧಿಕಾರಿ ಹುದ್ದೆಗೆ ಬಡ್ತಿ ನೀಡಲು ಇರುವ ಇಲಾಖಾ ಮುಂಬಡ್ತಿ ಸಮಿತಿಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**PR.2246**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಉದಯಕುಮಾರ, ಮಾಜಿ ಸಿ.ಪಿ.ಸಿ.–628, ಬ್ರಹ್ಮಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/6/2009 (ಡಿ.ಓ.ಬಿ. ಸಂಖ್ಯೆ: 1451/2010) ದಿನಾಂಕ: 02–08–2010
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಹಿಂಬರಹ ಸಂಖ್ಯೆ: ಅಪೀಲು/88/ಈವ/2010 ದಿನಾಂಕ: 19–02–2011
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19–5–2011
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)17/2011–12 ದಿನಾಂಕ: 25–11–2011

**ಪ್ರಸ್ತಾವನೆ:**

ಶ್ರೀ ಉದಯಕುಮಾರ, ಇವರು ಗುಲ್ಬರ್ಗಾ ಜಿಲ್ಲೆಯ ಬ್ರಹ್ಮಪೂರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ: 05–06–2008 ರಿಂದ ಇಲ್ಲಿಯ ವರೆಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02–08–2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ಗೈರುಹಾಜರಾದ ದಿನಾಂಕ: 05–06–2008 ರಿಂದ 30–07–2010ರ ವರೆಗಿನ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–02–2011ರ ಹಿಂಬರಹದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ

ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 53 ಪೊಸಿಅ 2011 ಬೆಂಗಳೂರು, ದಿನಾಂಕ: 16-10-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಉದಯಕುಮಾರ, ಮಾಜಿ ಸಿ.ಪಿ.ಸಿ.-628, ಬ್ರಹ್ಮಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತುಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.109**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ. ನಂಜುಂಡಸ್ವಾಮಿ, ಪಿ.ಸಿ.-541, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ವಿಶೇಷ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಡಿಇ/03/2007-08 (ಓ.ಬಿ. ಸಂ: 398/10-11) ದಿನಾಂಕ: 19-01-2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/64/2010-11 (ಓ.ಬಿ. ಸಂಖ್ಯೆ: 36/2011-12) ದಿನಾಂಕ: 30-9-2011
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16-12-2011
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)60/2011-12 ದಿನಾಂಕ: 18-4-2012

**ಪ್ರಸ್ತಾವನೆ:**

ಶ್ರೀ ಕೆ. ನಂಜುಂಡಸ್ವಾಮಿ, ಇವರು ಮಂಡ್ಯ ಜಿಲ್ಲೆಯ ಶಿವಳ್ಳಿ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

> "ನೀವು ಸಿ.ಪಿ.ಸಿ. 541 ಆಗಿ ಈ ಹಿಂದೆ ಶಿವಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 06-12-06 ರಿಂದ 19-5-07 ರವರೆಗೆ ಮೇಲಾಧಿಕಾರಿಗಳಿಂದ ಅನುಮತಿ ಅಥವಾ ರಜೆ ಅರ್ಜಿ ಸಲ್ಲಿಸದೆ 21 ದಿವಸಗಳಿಗೆ ಮೀರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದರಿಂದ ನಿಮ್ಮನ್ನು ಕರ್ತವ್ಯ ತ್ಯಾಗಿ ಎಂದು ಪರಿಗಣಿಸಿದ್ದು, ಸದರಿ ಸೂಚನಾ ಪತ್ರವನ್ನು ನೀವು ತೆಗೆದುಕೊಳ್ಳಲು ತಿರಸ್ಕರಿಸುವುದರ ಮೂಲಕ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತನ್ನು ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19-01-2011ರ ಆದೇಶದಲ್ಲಿ ಅರ್ಜಿದಾರರಿಗೆ ಸಿ.ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತದ ವೇತನಕ್ಕೆ ಇಳಿಸಲಾಗಿದೆ, ಆನಂತರ ಇವರು ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವುದು, ಕರ್ತವ್ಯಕ್ಕೆ ಗೈರುಹಾಜರಾದ ದಿನಾಂಕ: 06-12-2006 ರಿಂದ 19-5-2007ರ ವರೆಗೆ ಇಟ್ಟು 165 ದಿನಗಳನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ರನ್ವಯ ವೇತನ ರಹಿತ ರಜೆಯೆಂದು ದಿನಾಂಕ: 19-4-10 ರಿಂದ 01-11-10ರ ವರೆಗೆ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು Dies-non ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30-9-2011ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಾಡಿಸಿ ಇವರ ವೇತನವನ್ನು ಸಿ.ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತದ ವೇತನಕ್ಕೆ ಒಂದು ವರ್ಷದ ಅವಧಿಗೆ ನಂತರದ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಇಳಿಸಲಾಗಿದೆ. ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ: 06-12-06 ರಿಂದ 19-5-07ರ ವರೆಗೆ ಒಟ್ಟು 165 ದಿವಸಗಳನ್ನು ವೇತನ ರಹಿತ ರಜೆಯೆಂದು ದಿನಾಂಕ: 19-4-2010 ರಿಂದ 01-11-2010 ರವರೆಗೆ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು Dies-non ಎಂದು ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 138 ಪೊಸಿಅ 2011 ಬೆಂಗಳೂರು, ದಿನಾಂಕ: 16–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ನಂಜುಂಡಸ್ವಾಮಿ, ಪಿ.ಸಿ.–541, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ವಿಶೇಷ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.110

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಎನ್. ಸಂದೇಶ್ ಕುಮಾರ್, ಪಿ.ಐ., ಮಂಡ್ಯ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಇವಿ/84/2010–11 (ಓ.ಬಿ. ಸಂಖ್ಯೆ: 25/2011–12) ದಿನಾಂಕ: 27–7–2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)57/2011–12 (ಓ.ಬಿ. ಸಂಖ್ಯೆ: 3/2012) ದಿನಾಂಕ: 28–01–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26–4–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)57/2011–12 ದಿನಾಂಕ: 16–7–2012.

**ಪ್ರಸ್ತಾವನೆ:**

ಶ್ರೀ ಸಂದೇಶ್ ಕುಮಾರ್, ಪಿ.ಐ., ಇವರು ಕೆ.ಆರ್. ನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> " ಶ್ರೀ ಸಂದೇಶ್ ಕುಮಾರ್, ಸಿ.ಪಿ.ಐ., ಕೆ.ಆರ್. ನಗರ ವೃತ್ತ, ಮೈಸೂರು ಜಿಲ್ಲೆ ರವರು ದಿನಾಂಕ: 02–12–2010ರ ಮಧ್ಯರಾತ್ರಿ ಕೆ.ಆರ್. ನಗರ ಪಟ್ಟಣದ ವೀರಭದ್ರೇಶ್ವರ ನಗರ, ಸಿದ್ದಲಿಂಗೇಶ್ವರ ಬಡಾವಣೆ ಮತ್ತು ಪಿ&ಟಿ ಕಾಲೋನಿಯಲ್ಲಿ ನಡೆದಿರುವ ಸರಣಿ ದರೋಡೆಯನ್ನು ತಡೆಗಟ್ಟಲು ವಿಫಲರಾಗಿ ಕರ್ತವ್ಯದಲ್ಲಿ ತೋರಿರುವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 27–7–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–01–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 44 ಪೊಸಿಅ 2012 ಬೆಂಗಳೂರು, ದಿನಾಂಕ: 16–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಂದೇಶ್ ಕುಮಾರ್, ಪಿ.ಐ., ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.111

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿಜಯಕುಮಾರ, ಮಾಜಿ ಎ.ಪಿ.ಸಿ.–303, ಡಿ.ಎ.ಆರ್., ಬೀದರ್ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ: 01/ಇಪಿ/ಬೀ/2010 ದಿನಾಂಕ: 10–02–2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/23/ಈವ/2011 (ಆ.ಪು. ಸಂಖ್ಯೆ: 508/ಈವ/2011) ದಿನಾಂಕ: 10–10–2011
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 31–01–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)69/2011–12 ದಿನಾಂಕ: 30–4–2012

**ಪ್ರಸ್ತಾವನೆ:**

ಶ್ರೀ ವಿಜಯಕುಮಾರ, ಇವರು ಡಿ.ಎ.ಆರ್. ಬೀದರ್‌ನಲ್ಲಿ ಎ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಒಬ್ಬ ವ್ಯಕ್ತಿಯು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣರಾದ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ವಿಜಯಕುಮಾರ, ಎ.ಪಿ.ಸಿ.–303 ಡಿ.ಎ.ಆರ್. ಬೀದರ ಇದ್ದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ನೀವು ಬೀದರ ಪೊಲೀಸ್ ಕಲ್ಯಾಣ ಮಂಟಪ ವಸತಿ ಗೃಹದಲ್ಲಿ ವಾಸಿಸುತ್ತಿದ್ದು, ವಾಸವಾಗಿರುವ ಪೊಲೀಸ್ ವಸತಿ ಗೃಹದ ಪಕ್ಕದಲ್ಲಿ ಮೃತ ಈರಪ್ಪಾ ಎ.ಹೆಚ್.ಸಿ. 25 ಡಿ.ಎ.ಆರ್. ಬೀದರ ರವರು ವಾಸಿಸುತ್ತಿದ್ದು ಸದರಿ ಮೃತ ಈರಪ್ಪಾ ಇವರ ಮಗಳಾದ ಕು: ರೇಣುಕಾ ಇವಳಿಗೆ ಸುಮಾರು ಒಂದು ವರ್ಷದಿಂದ ಮದುವೆ ಮಾಡಿಕೊಳ್ಳುವುದಾಗಿ ಹೇಳಿ ಹೆದರಿಸಿ ಚುಡಾಯಿಸುವುದು ಮಾಡಿ ಹಿಂಸೆ ಮತ್ತು ಕಿರುಕುಳ ನೀಡುತ್ತಾ ಬಂದಿದರಿಂದ ಈ ವಿಷಯ ಮೃತ ಈರಪ್ಪನಿಗೆ ಮತ್ತು ಮೃತನ ಹೆಂಡತಿಗೆ ಗೊತ್ತಾಗಿ ಸದರಿಯವರು ನಿಮಗೆ ದಿನಾಂಕ: 22, 23/09/09 ರಂದು ಕೇಳಿದಾಗ ನೀವು ಅವರ ಮುಂದೆ ಕ್ಷಮೆ ಕೇಳಿ ಮುಂದೆ ಚುಡಾಯಿಸದಂತೆ ಒಪ್ಪಿಕೊಂಡಿರುವಿರಿ. ಕೆಲವು ದಿವಸಗಳ ನಂತರ ನೀವು ಪುನಃ ಮೃತ ಈರಪ್ಪಾ ಇವರ ಮಗಳಾದ ಕು: ರೇಣುಕ ಇವಳಿಗೆ ಮೊದಲಿನಂತೆ ಚುಡಾಯಿಸುವುದು ಮಾಡಿ ಮೃತ ಈರಪ್ಪ ಇವರಿಗೆ ಆತ್ಮಹತ್ಯೆ ಮಾಡಿಕೊಳ್ಳಲು ದುಷ್ಪ್ರೇರಣೆ ನೀಡಿದರಿಂದ ಮೃತ ಈರಪ್ಪ ಇವರು ನಿಮ್ಮ ಕಿರುಕುಳವನ್ನು ಸಹಿಸದೆ ಮತ್ತು ಅವರು ತಮ್ಮ ಕುಟುಂಬದ ಮರ್ಯಾದೆ ಹಾಗೂ ತಮ್ಮ ಮಗಳ ಭವಿಷ್ಯ ಹಾಳಾಗುತ್ತಿದ್ದುದರಿಂದ ಮೃತ ಈರಪ್ಪಾ ಇವರು ಸಾಯುವುದಕ್ಕಿಂತ ಮುಂದೆ ತನ್ನ ಸಾವಿಗೆ ವಿಜಯಕುಮಾರ ಎ.ಪಿ.ಸಿ.–303 ರವರೆ ಕಾರಣಿಭೂತರಾಗಿರುತ್ತಾರೆ ಅಂತಾ ಒಂದು ಚೀಟಿಯಲ್ಲಿ ಬರೆದು ದಿನಾಂಕ: 05–01–2010 ರಂದು ಸಾಯಂಕಾಲ 1800 ಗಂಟೆಯಿಂದ 1830 ಅವಧಿಯಲ್ಲಿ ಬೀದರ ಪೊಲೀಸ್ ಕಲ್ಯಾಣ ಮಂಟಪ ವಸತಿ ಗೃಹ ಸಂ 10–01–37ರ ಪೂಜಾ ಕೋಣೆಯಲ್ಲಿ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುತ್ತಾರೆ. ಇದರಿಂದ ನೀವು ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನಿಮಗೆ ಕಾನೂನಿನ ಅರಿವಿದ್ದರು ಸಹ ನೀವು ಮೃತ ಈರಪ್ಪಾ ಇವರ ಮಗಳಾದ ಕು: ರೇಣುಕಾ ಇವಳಿಗೆ ಚುಡಾಯಿಸುವದು ಹೆದರಿಸುವುದು ಹಿಂಸೆ ಮತ್ತು ಕಿರುಕುಳ ನೀಡಿ ಮೃತ ಈರಪ್ಪಾ ಆತ್ಮಹತ್ಯೆ ಮಾಡಿಕೊಳ್ಳುವಂತೆ ದುಷ್ಪ್ರೇರಣೆ ನೀಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 10–02–2011ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ, ದಿನಾಂಕ: 06–01–2010 ರಿಂದ 13–9–10ರ ವರೆಗಿನ ಅಮಾನತ್ತಿನ ಅವಧಿಯನ್ನು ಅರ್ಹರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–10–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಒಬ್ಬ ವ್ಯಕ್ತಿಯು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 10 ಪೊಸಿಅ 2012 ಬೆಂಗಳೂರು, ದಿನಾಂಕ: 16–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಜಯಕುಮಾರ, ಮಾಜಿ ಎ.ಪಿ.ಸಿ.–303, ಡಿ.ಎ.ಆರ್., ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.112

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಔಷಧಿ ವಿಷಯದ ಅಭಿವೃದ್ಧಿಗಾಗಿ ಒಂದು ಪ್ರತ್ಯೇಕವಾದ "ಕರ್ನಾಟಕ ಔಷಧ ವಸ್ತುಗಳ ನೀತಿ, 2012"ನ್ನು ರೂಪಿಸಿ ಪ್ರಕಟಿಸುವ ಬಗ್ಗೆ.

**ಪ್ರಸ್ತಾವನೆ:**

2012-13ರ ಆಯವ್ಯಯ ಭಾಷಣದಲ್ಲಿ ಔಷಧ ವಿಷಯದ ಅಭಿವೃದ್ಧಿಗಾಗಿ ಒಂದು ಪ್ರತ್ಯೇಕವಾದ ಸಮಗ್ರ ನೀತಿಯನ್ನು ರೂಪಿಸಲಾಗುವುದೆಂದು ಘೋಷಿಸಲಾಗಿದ್ದು ತತ್ಸಂಬಂಧವಾಗಿ ಔಷಧ ನಿಯಂತ್ರಣ ಇಲಾಖೆಯು ಔಷಧಿ ಉದ್ದಿಮೆಯಲ್ಲಿ ತೊಡಗಿರುವ ಸಂಘ ಸಂಸ್ಥೆಗಳೊಂದಿಗೆ ಸಮಗ್ರವಾಗಿ ಚರ್ಚಿಸಿ ಬಯೋಟೆಕ್ ನೀತಿ ಮತ್ತು ಕೈಗಾರಿಕಾ ಅಭಿವೃದ್ಧಿ ನೀತಿಯಲ್ಲಿರುವ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಔಷಧ ವಸ್ತುಗಳ ನೀತಿ, 2012ನ್ನು ತಯಾರಿಸಿ ಸರ್ಕಾರದ ಮುಂದಿನ ಕ್ರಮಕ್ಕಾಗಿ ಕಳುಹಿಸಿರುತ್ತಾರೆ.

ಸಮಗ್ರವಾದ ರೀತಿಯಲ್ಲಿ ಔಷಧ ವಸ್ತುಗಳ ತಯಾರಿಕಾ ಕ್ಷೇತ್ರದ ಉನ್ನತಿಗಾಗಿ ಒಂದು ಪ್ರತ್ಯೇಕ ನೀತಿಯನ್ನು ರೂಪಿಸುವ ಅಗತ್ಯತೆಯನ್ನು ಮನಗಂಡಿರುವ ಸರ್ಕಾರವು ಔಷಧ ನಿಯಂತ್ರಕರು ಸಲ್ಲಿಸಿರುವ ಕರಡು ಔಷಧ ವಸ್ತುಗಳ ನೀತಿ 2012ರಲ್ಲಿ ಎಲ್ಲಾ ಬಂಡವಾಳ ಹೂಡಿಕೆದಾರರಿಗೆ ಸಮಪಾತ್ರ ವಹಿಸುವ ಕ್ಷೇತ್ರವನ್ನು ಒದಗಿಸುವ ಮೂಲಕ ತ್ವರಿತ ಅಭಿವೃದ್ಧಿಗಾಗಿ ಫಾರ್ಮಾ ವಲಯದ ಪ್ರಮುಖ ವಿಭಾಗಗಳಾದ ದೊಡ್ಡ ಪ್ರಮಾಣದ ಔಷಧಿಗಳು, ಮಧ್ಯಂತರ ಔಷಧಿಗಳು, ಜೈವಿಕ ಔಷಧ ವಸ್ತುಗಳು ಹಾಗೂ ಇನ್ನಿತರ ಸೂತ್ರೀಕರಣಗಳನ್ನು ಒಳಗೊಂಡಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ ಹಾಗೂ ಈ ಔಷಧ ನೀತಿಯನ್ನು ತಯಾರಿಸುವಲ್ಲಿ ರಾಜ್ಯದ ಬಯೋಟೆಕ್ ನೀತಿ ಮತ್ತು ಕೈಗಾರಿಕಾ ಅಭಿವೃದ್ಧಿ ನೀತಿಯಲ್ಲಿರುವ ಅಂಶಗಳನ್ನು ಸಹ ಗಮನಿಸಿದೆ.

ಔಷಧ ವಸ್ತುಗಳ ತಯಾರಿಕಾ ಕ್ಷೇತ್ರದ ಉನ್ನತಿಗಾಗಿ ರಾಜ್ಯ ಸರ್ಕಾರವು ಜಾರಿಗೆ ತರುತ್ತಿರುವ "ಕರ್ನಾಟಕ ಔಷಧ ವಸ್ತುಗಳ ನೀತಿ", 2012ರ ಬಗ್ಗೆ ಸಚಿವ ಸಂಪುಟ ಹಾಗೂ ಸರ್ಕಾರದ ವಿವಿಧ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದೆ.

ಔಷಧಿ ರಂಗದಲ್ಲಿರುವ ಉತ್ಪಾದಕರು ರಾಜ್ಯದಲ್ಲಿ ಈಗಾಗಲೇ ಕೆಲವೊಂದು ಉತ್ತೇಜನಗಳಿಗೆ ಅರ್ಹರಾಗಿದ್ದರೂ ಔಷಧಿ ರಂಗಕ್ಕೆ ಹೆಚ್ಚು ಒತ್ತು ನೀಡಬೇಕಾದ ಹಿನ್ನೆಲೆಯಲ್ಲಿ ಇನ್ನೂ ಕೆಲವೊಂದು ಉತ್ತೇಜನಗಳನ್ನು ನೀಡಲು ಸರ್ಕಾರವು ಉದ್ದೇಶಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 95 ಐಎಂಎಂ 2012 ಬೆಂಗಳೂರು, ದಿನಾಂಕ:24-01-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಔಷಧ ವಸ್ತುಗಳ ತಯಾರಿಕಾ ಕ್ಷೇತ್ರದ ಉನ್ನತಿಗಾಗಿ ಕೈಗಾರಿಕಾ ನೀತಿಯಲ್ಲಿ ಒಳಗೊಂಡಿರುವ ಅಂಶಗಳಾದ ಪೀಠಿಕೆ, ಅನುಬಂಧ-1, 2 ಹಾಗೂ 4ನ್ನು ಸಹ ಒಳಗೊಂಡಂತೆ ಅನುಬಂಧ-3ರಲ್ಲಿರುವ ಈ ಆದೇಶದೊಂದಿಗೆ ಲಗತ್ತಿಸಿರುವ "ಕರ್ನಾಟಕ ಔಷಧ ವಸ್ತುಗಳ ನೀತಿ, 2012"ನ್ನು ಅನುಮೋದಿಸಿದೆ.

ಪ್ರಸ್ತುತ ಜಾರಿಗೆ ತರುತ್ತಿರುವ "ಕರ್ನಾಟಕ ಔಷಧ ವಸ್ತುಗಳ ನೀತಿ, 2012"ರಲ್ಲಿನ ಯಾವುದೇ ಅಂಶದ ಬದಲಾವಣೆ/ಮಾರ್ಪಾಡು ಇತ್ಯಾದಿಗಳ ಬಗ್ಗೆ ಕ್ರಮ ತೆಗೆದುಕೊಳ್ಳುವ ಸಕ್ಷಮ ಪ್ರಾಧಿಕಾರ ಸರ್ಕಾರ ಮಾತ್ರ ಆಗಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ:681/5:2012ರಲ್ಲಿ ದಿನಾಂಕ:2.6.2012ರಂದು ನೀಡಿರುವ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಕರ್ನಾಟಕ ಔಷಧ ವಸ್ತುಗಳ (ಫಾರ್ಮಾಸ್ಯೂಟಿಕಲ್) ನೀತಿ, 2012

**1.0 ಪೀಠಿಕೆ**

ಕರ್ನಾಟಕವು ಔಷಧ ವಸ್ತುಗಳಿಗೆ ಸಂಬಂಧಿಸಿದ ಕ್ಷೇತ್ರದಲ್ಲಿ ರಾಷ್ಟ್ರದಲ್ಲಿ ತೀವ್ರಗತಿಯಲ್ಲಿ ಬೆಳೆಯುತ್ತಿರುವ ರಾಜ್ಯಗಳಲ್ಲಿ ಒಂದಾಗಿದೆ ಮತ್ತು ಪ್ರಸ್ತುತ ಔಷಧ ವಸ್ತುಗಳ ರಫ್ತಿನಲ್ಲಿ 5ನೇ ಸ್ಥಾನದಲ್ಲಿದೆ.ರಾಜ್ಯವು ಭಾರತದ ಔಷಧ ವಸ್ತುಗಳ ರಫ್ತು ಆದಾಯಗಳಲ್ಲಿ ಸುಮಾರು ಶೇ.10ರಷ್ಟು ಕೊಡುಗೆ ನೀಡುತ್ತಿದೆ. ರಾಜ್ಯದಲ್ಲಿ ಪ್ರಸ್ತುತ 230 ಔಷಧ ತಯಾರಿಕಾ ಮತ್ತು ಜೈವಿಕ ತಂತ್ರಜ್ಞಾನ ಕಂಪನಿಗಳಿವೆ. ಇವು 2010-11ನೇ ಸಾಲಿನಲ್ಲಿ ಸುಮಾರು 6500 ಕೋಟಿ ರೂಪಾಯಿಗಳಷ್ಟು ಒಟ್ಟು ವಹಿವಾಟನ್ನು ಸಾಧಿಸಿವೆ ಮತ್ತು ಹಿಂದಿನ ವರ್ಷಕ್ಕಿಂತ ಶೇ.10ರಷ್ಟು ಬೆಳವಣಿಗೆಯನ್ನು ದಾಖಲಿಸಿವೆ. ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಾಕಷ್ಟು ಸಂಖ್ಯೆಯ ಪ್ರತಿಷ್ಠಿತ ಮತ್ತು ಜಾಗತಿಕವಾಗಿ ಹೆಸರು ಮಾಡಿರುವ ಔಷಧ ತಯಾರಿಕಾ ಕಂಪನಿಗಳು ಕರ್ನಾಟಕಕ್ಕೆ ಹೆಸರು ಮತ್ತು ಕೀರ್ತಿಯನ್ನು ತಂದುಕೊಟ್ಟಿವೆ.

ಸರ್ಕಾರವು ರಾಜ್ಯದಾದ್ಯಂತ ಕೈಗಾರಿಕೆ ಮತ್ತು ಸೇವಾ ವಲಯಗಳ ಸರ್ವತೋಮುಖ ಅಭಿವೃದ್ಧಿಗೆ ಕಟಿಬದ್ಧವಾಗಿದೆ.ರಾಜ್ಯದಲ್ಲಿ ಸಾಕಷ್ಟು ಸಂಖ್ಯೆಯ ವಲಯ ನಿರ್ದಿಷ್ಟ ನೀತಿಗಳು ಜಾರಿಯಲ್ಲಿದ್ದು, ರಾಜ್ಯವು ಸಂಬಂಧಪಟ್ಟ ವಲಯಗಳ ಬೆಳವಣಿಗೆ ಮತ್ತು ಅಭಿವೃದ್ಧಿಗೆ ಅಗತ್ಯವಾದ ಚಾಲನಾ ಶಕ್ತಿಯನ್ನು ನೀಡುತ್ತಿದೆ.ರಾಜ್ಯದಲ್ಲಿ ಕೈಗಾರಿಕೆಗಳ ವ್ಯವಸ್ಥಿತವಾದ ಅಭಿವೃದ್ಧಿಗೆ ಕರ್ನಾಟಕ ಕೈಗಾರಿಕಾ ನೀತಿ 2009-14 ಒಂದು ಪ್ರಧಾನ ನೀತಿಯಾಗಿ ಕಾರ್ಯನಿರ್ವಹಿಸುತ್ತಿದೆ.

ಸಹಸ್ರಮಾನದ ಜೈವಿಕ ತಂತ್ರಜ್ಞಾನ ನೀತಿ 2001 ಮತ್ತು ಆ ತರುವಾಯ 2006ರಲ್ಲಿ ಘೋಷಿಸಿದ ಜೈವಿಕ ತಂತ್ರಜ್ಞಾನ ನೀತಿಗಳು ಔಷಧ ತಯಾರಿಕಾ ಉದ್ಯಮಕ್ಕೆ ಒಂದು ಸ್ಥಿರವಾದ ಬುನಾದಿಯನ್ನು ಹಾಕಿಕೊಟ್ಟಿವೆ.ಈ ದೂರದೃಷ್ಟಿಯುಳ್ಳ ನೀತಿಗಳು ಮತ್ತು ಪ್ರೋತ್ಸಾಹದಿಂದಾಗಿ ಅನೇಕ ಭಾರತೀಯ ಮತ್ತು ಅಂತರಾಷ್ಟ್ರೀಯ ಕಂಪನಿಗಳು ಕರ್ನಾಟಕದಲ್ಲಿ ಔಷಧ ವಸ್ತುಗಳ ಸೇವೆಗಳ ನೆಚ್ಚಿನ ಸ್ಥಳವನ್ನಾಗಿ ಮಾಡಿಕೊಂಡು ಈಗಾಗಲೇ ಕಾರ್ಯಾರಂಭ ಮಾಡಿರುತ್ತವೆ.

ಇಂದು, ಕರ್ನಾಟಕವು ತನ್ನ ತಯಾರಿಕಾ ಸಾಮರ್ಥ್ಯಗಳಿಂದಾಗಿ ವಿಶ್ವದಾದ್ಯಂತ ಗುರುತಿಸಲ್ಪಟ್ಟಿದೆ ಮತ್ತು ಅಧಿಕ ಗುಣಮಟ್ಟದ ಮತ್ತು ಕೈಗೆಟುಕುವ ಬೆಲೆಯ ಸಾರ್ವತ್ರಿಕ (ಎಲ್ಲಾ ಕಾಯಿಲೆಗಳಿಗೂ ಅನ್ವಯಿಸುವ) ಔಷಧಿಗಳ ಮೂಲವೆಂಬ ಮನ್ನಣೆಯನ್ನು ಪಡೆದಿದೆ.ರಾಜ್ಯವು ಅಂತರಾಷ್ಟ್ರೀಯ ನಿಯಂತ್ರಣ ಪ್ರಮಾಣಪತ್ರಗಳನ್ನು ಹೊಂದಿರುವ ಅನೇಕ ಆಧುನಿಕ ಸ್ಥಾವರಗಳನ್ನು ಹೊಂದಿದೆ.

ಭಾರತೀಯ ಔಷಧ (ಫಾರ್ಮಾ) ಉದ್ಯಮವು 2020ರ ವೇಳೆಗೆ ಶೇ.15–20ರಷ್ಟು ಸಿಎಜಿಆರ್‌ನಲ್ಲಿ ಬೆಳವಣಿಗೆ ಸಾಧಿಸುವ ಮತ್ತು 50 ಬಿಲಿಯನ್ ಅಮೇರಿಕನ್ ಡಾಲರ್‌ನಷ್ಟು ವಹಿವಾಟನ್ನು ಸಾಧಿಸುವ ನಿರೀಕ್ಷೆಯನ್ನು ಹೊಂದಿದೆ.ಸಕ್ರಿಯ ಔಷಧ ವಸ್ತುಗಳ ಘಟಕಗಳ (ಎಪಿಐ) ಮಾರುಕಟ್ಟೆಯು ತ್ವರಿತ ಗತಿಯಲ್ಲಿ ವಿಸ್ತಾರಗೊಳ್ಳುತ್ತಿದ್ದು ಸೂತ್ರೀಕರಣ ತಯಾರಕರು ಮುಂಬರುವ ಪೇಟೆಂಟ್ (ಹಕ್ಕುಸ್ವಾಮ್ಯ) ಸ್ಪರ್ಧೆಯ ಕಾರಣದಿಂದ ಬಹಳಷ್ಟು ಅವಕಾಶಗಳನ್ನು ಹೊಂದಿದ್ದಾರೆ.

ಕರ್ನಾಟಕವು ಜೈವಿಕ ಔಷಧ ವಸ್ತುಗಳ ತಯಾರಿಕೆಯಲ್ಲಿ ಮುಂದಾಳತ್ವವನ್ನು ಕಾಪಾಡಿಕೊಂಡು ಬರುತ್ತಿದ್ದು, ಜೈವಿಕ ಔಷಧೀಯ ವಸ್ತುಗಳ ತಯಾರಿಕೆಯು ಭಾರತದ ಒಟ್ಟಾರೆ ಜೈವಿಕ ತಂತ್ರಜ್ಞಾನ ವಲಯದ ಪೈಕಿ ಶೇ.60ರಷ್ಟು ಷೇರನ್ನು ಹೊಂದಿದ್ದು, ಇದು 2010–11ನೇ ಸಾಲಿನಲ್ಲಿ 17,000ಕೋಟಿ ರೂಪಾಯಿಗಳಿಗೂ ಹೆಚ್ಚಿನ ಮೌಲ್ಯವನ್ನು ಗಳಿಸಿಕೊಂಡಿದೆ.

ಪ್ರಸ್ತುತ, ಕರ್ನಾಟಕವು ಪ್ರಧಾನವಾಗಿ ಜೀವಕೋಶ ಸಂಸ್ಕೃತಿಯನ್ನು ಬಳಸಿಕೊಂಡು ಉತ್ಪಾದಿಸಲಾಗುವ ಕ್ಯಾನ್ಸರ್ ನಿರೋಧಕ ಔಷಧಿಗಳು ಹಾಗೂ ಇನ್ಸುಲಿನ್ ಮತ್ತು ಲಸಿಕೆಗಳನ್ನು ಒಳಗೊಂಡಿರುವ ಏಕಕ್ಲೋನೀಯ ಪ್ರತಿಕಾಯಗಳನ್ನು (ಮಾನೋಕ್ಲೋನಲ್ ಆ್ಯಂಟಿಬಾಡೀಸ್) (ಎಂಎಬಿಗಳು) ತಯಾರಿಸುವ ಕೆಲವೇ ಕೆಲವು ಸಮರ್ಪಿತ ಜೈವಿಕ ಔಷಧ ವಸ್ತುಗಳ ತಯಾರಿಕಾ ಕಂಪನಿಗಳನ್ನು ಹೊಂದಿದೆ. ಈ ಅತೀ ವಿಶಿಷ್ಟವಾದ ಕ್ಷೇತ್ರದಲ್ಲಿ ತನ್ನ ಮುಂದಾಳತ್ವವನ್ನು ಕಾಪಾಡಿಕೊಂಡು ಬರಲು ಕರ್ನಾಟಕಕ್ಕೆ ಒಂದು ದೃಢವಾದ ಕಾರ್ಯತಂತ್ರದ ಅವಶ್ಯಕತೆಯಿದೆ.ಔಷಧ ವಸ್ತುಗಳ ಉತ್ಪನ್ನಗಳು 2016ರ ವೇಳೆಗೆ ಜಾಗತಿಕ ಔಷಧ ವಸ್ತುಗಳ ಮಾರುಕಟ್ಟೆಯ ಕಾಲು ಭಾಗವನ್ನು (ನಾಲ್ಕನೇ ಒಂದು) ಆಕ್ರಮಿಸಿಕೊಳ್ಳುವ ಗುರಿಯಾಗಿಟ್ಟುಕೊಂಡಿರುವುದರಿಂದ, ರಾಜ್ಯವು ಪೂರ್ವಭಾವಿ ಕ್ರಮಗಳನ್ನು ಕೈಗೊಳ್ಳುವ ಮೂಲಕ ತನ್ನ ಅಗ್ರ ಸ್ಥಾನವನ್ನು ಬಲಪಡಿಸಿಕೊಳ್ಳುವ ಅಗತ್ಯವಿದೆ.

ಅಂತರಾಷ್ಟ್ರೀಯವಾಗಿ ಅತಿ ಹೆಚ್ಚು ಮಾರಾಟವಾಗುತ್ತಿರುವ ಅನೇಕ ಔಷಧಿಗಳು ಇಷ್ಟರಲ್ಲೇ ಹಕ್ಕುಸ್ವಾಮ್ಯ (ಪೇಟೆಂಟ್)ವನ್ನು ಕಳೆದುಕೊಳ್ಳುವ ಹಂತದಲ್ಲಿವೆ.ತನ್ನ ತಯಾರಿಕಾ ಮೂಲವನ್ನು ವೃದ್ಧಿಸಿಕೊಳ್ಳಲು ರಾಜ್ಯಕ್ಕೆ ಭಾರೀ ಸಾಮರ್ಥ್ಯವನ್ನು ಇದು ಒದಗಿಸಿಕೊಡಲಿದೆ.

4ನೇ ನವೆಂಬರ್ 2011ರಂದು ಭಾರತ ಸರ್ಕಾರವು ಘೋಷಿಸಿದ ರಾಷ್ಟ್ರೀಯ ತಯಾರಿಕಾ ನೀತಿಯು ಬಲವಾದ ಇಂಜಿನಿಯರಿಂಗ್ ಅಡಿಪಾಯವನ್ನು ಹೊಂದಿರುವ ಭಾರತದ ಬೃಹತ್ ದೇಶೀ ಮಾರುಕಟ್ಟೆಯು ಇತರ ಕ್ಷೇತ್ರಗಳ ಜೊತೆಗೆ ಔಷಧ ವಸ್ತುಗಳ ತಯಾರಿಕಾ ಕ್ಷೇತ್ರದಲ್ಲೂ ಕೂಡ ದೇಶೀಯ ತಜ್ಞತೆ ಮತ್ತು ಬೆಲೆ ಪರಿಣಾಮಕಾರಿ (ಮಿತವ್ಯಯ) ತಯಾರಿಕೆಯನ್ನು ಸೃಜಿಸಿದೆ ಎಂಬುದನ್ನು ಒಪ್ಪಿಕೊಳ್ಳುತ್ತದೆ.ನೀತಿಯು ಜಾಗತಿಕವಾಗಿ ಮುಂದಾಳತ್ವವನ್ನು ಉಳಿಸಿಕೊಳ್ಳುವ ಸಲುವಾಗಿ ಸ್ಥಿರ ಕೈಗಾರಿಕಾ ತಳಹದಿಯನ್ನು ಬಲಪಡಿಸಲು ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವ ಅಗತ್ಯತೆಯ ಬಗ್ಗೆ ಒತ್ತಿ ಹೇಳುತ್ತದೆ.

ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯವು ಪರಿಶುದ್ಧವಾಗಿ ಸಮಗ್ರವಾದ ರೀತಿಯಲ್ಲಿ ಔಷಧ ವಸ್ತುಗಳ ತಯಾರಿಕಾ ಕ್ಷೇತ್ರದ ಉನ್ನತಿಗಾಗಿ ಒಂದು ಪ್ರತ್ಯೇಕ ನೀತಿಯನ್ನು ರೂಪಿಸುವ ಅಗತ್ಯತೆಯನ್ನು ಮಾನ್ಯ ಮಾಡಿದೆ.ಈ ನೀತಿಯು ಎಲ್ಲಾ ಬಂಡವಾಳ ಹೂಡಿಕೆದಾರರಿಗೆ ಸಮ ಪಾತ್ರ ವಹಿಸುವ ಕ್ಷೇತ್ರವನ್ನು ಒದಗಿಸುವ ಮೂಲಕ ತ್ವರಿತ ಅಭಿವೃದ್ಧಿಗಾಗಿ ಫಾರ್ಮಾ ವಲಯದ ಪ್ರಮುಖ ವಿಭಾಗಗಳಾದ ದೊಡ್ಡ ಪ್ರಮಾಣದ ಔಷಧಿಗಳು (ಬಲ್ಕ್ ಡ್ರಗ್ಸ್), ಮಧ್ಯಂತರ ಔಷಧಿಗಳು (ಇಂಟರ್ ಮೀಡಿಯಟ್ಸ್), ಜೈವಿಕ ಔಷಧ ವಸ್ತುಗಳು ಹಾಗೂ ಸೂತ್ರೀಕರಣಗಳನ್ನು (ಫಾರ್ಮುಲೇಷನ್ಸ್) ಒಳಗೊಂಡಿರುತ್ತದೆ.

**2.0 ಮುನ್ನೋಟ (ದೂರದೃಷ್ಟಿ):**

ಸಾರ್ವಜನಿಕರಿಗೆ ನವೀನವಾದ, ಗುಣಮಟ್ಟದ ಮತ್ತು ಕೈಗೆಟುಕುವ ಬೆಲೆಯ ಆರೋಗ್ಯ ಪಾಲನಾ ಪರಿಹಾರಗಳನ್ನು ಒದಗಿಸಲು ರಾಜ್ಯದ ಜ್ಞಾನಾಧಾರಿತ ಸಂಸ್ಥೆಗಳು ಹಾಗೂ ಪರಿಣತಿ ಹೊಂದಿದ ಸಂಪನ್ಮೂಲಗಳ ಸಾಮರ್ಥ್ಯಗಳನ್ನು ಬಳಸಿಕೊಳ್ಳುವ ಮೂಲಕ ಕರ್ನಾಟಕವನ್ನು ಒಂದು ಸ್ಪಂದನಶೀಲ ಔಷಧ ವಸ್ತುಗಳ ತಯಾರಿಕಾ ಸ್ಥಳವನ್ನಾಗಿ ಮಾಡುವುದು.

**3.0 ಧ್ಯೇಯೋದ್ದೇಶಗಳು:**

**3.1.** ಕೈಗೆಟುಕುವ ವೈದ್ಯಕೀಯ ಚಿಕಿತ್ಸೆ ಮತ್ತು ಎಲ್ಲವನ್ನೂ ಒಳಗೊಂಡ ಆರ್ಥಿಕ ಅಭಿವೃದ್ಧಿಯ ವೇದಿಕೆಯ ಮೇಲೆ ಔಷಧ ವಸ್ತುಗಳ ತಯಾರಿಕಾ ವಲಯದಲ್ಲಿ ಕರ್ನಾಟಕಕ್ಕೆ ಮುಂದಾಳತ್ವದ ಪ್ರೊಫೈಲ್ (ಚಿತ್ರಣ) ಅನ್ನು ಬೆಳೆಸುವುದು.

**3.2.** ಕರ್ನಾಟಕವನ್ನು ಔಷಧ ವಸ್ತುಗಳ ತಯಾರಿಕಾ ವಲಯಗಳಲ್ಲಿ ಅತ್ಯಂತ ನೆಚ್ಚಿನ ಬಂಡವಾಳ ಹೂಡಿಕೆ ಸ್ಥಳವನ್ನಾಗಿಸುವುದು.

**3.3.** ಶೈಕ್ಷಣಿಕ, ಕೈಗಾರಿಕಾ ಹಾಗೂ ಸಂಶೋಧನೆ ಮತ್ತು ಅಭಿವೃದ್ಧಿ (ಆರ್ & ಡಿ) ಜೈವಿಕ ವ್ಯವಸ್ಥೆಯನ್ನು ಸಮರ್ಥಗೊಳಿಸುವ ಮೂಲಕ ಔಷಧ ವಸ್ತುಗಳ ವಲಯಕ್ಕೆ ಒಂದು ನವೀನ ಕೇಂದ್ರ ಸ್ಥಾನವಾಗಿ ನಿರ್ಮಾಣ ಮಾಡುವುದು.

**3.4.** ಒಟ್ಟಾರೆ (ಅಂತರ್ಗತ) ಅಭಿವೃದ್ಧಿ ದೃಷ್ಟಿಕೋನದ ಮುಖಾಂತರ ಕರ್ನಾಟಕದ ಜನತೆಗೆ ಹೆಚ್ಚುವರಿ ಉದ್ಯೋಗಾವಕಾಶಗಳನ್ನು ಸೃಜಿಸುವುದು.

**4.0 ಕಾರ್ಯತಂತ್ರಗಳು:**

**4.1** ರಾಜ್ಯದ ಬೆಳವಣಿಗೆ ಸಾಧ್ಯವಿರುವ ಸ್ಥಳಗಳಲ್ಲಿ ಔಷಧ ವಸ್ತುಗಳ ಪಾರ್ಕುಗಳ ಮೂಲಕ ಕ್ಲಸ್ಟರ್ ಪರಿಕಲ್ಪನೆಯ ಆಧಾರದ ಮೇಲೆ ಔಷಧ ವಸ್ತುಗಳ ಉದ್ಯಮಗಳನ್ನು ಸ್ಥಾಪಿಸುವುದಕ್ಕಾಗಿ ಬಳಕೆಗೆ ಸಿದ್ಧವಾದ ಮೂಲ ಸೌಕರ್ಯವನ್ನು ಒದಗಿಸುವುದು [ಅನುಬಂಧ–3(1)(ಎ, ಬಿ ಮತ್ತು ಸಿ) ಅನ್ನು ನೋಡಿ].

**4.2.** ಔಷಧ ವಸ್ತುಗಳ ವಲಯಕ್ಕೆ ಎಲ್ಲಾ ಮಟ್ಟಗಳಲ್ಲಿ ನಿಯೋಜನೆಗೆ ಸಿದ್ಧವಾಗಿರುವ ಮಾನವ ಶಕ್ತಿಯನ್ನು ದೊರಕಿಸಿಕೊಡಲು ಮಾನವ ಸಂಪನ್ಮೂಲ ಅಭಿವೃದ್ಧಿಯ ಬಗ್ಗೆ ಒತ್ತು ನೀಡುವುದು [5.4 ಅನ್ನು ನೋಡಿ].

4.3. ಸರ್ಕಾರಿ ಟೆಂಡರ್‌ಗಳಲ್ಲಿ ಬೆಲೆ ರಿಯಾಯಿತಿಯ ಮೂಲಕ ಕರ್ನಾಟಕ ಕಂಪನಿಗಳಿಗೆ ಮಾರುಕಟ್ಟೆ ಬೆಂಬಲವನ್ನು ಒದಗಿಸುವುದು.

4.4. ಎರಡು ವರ್ಷಗಳಿಗೊಮ್ಮೆ ನಡೆಸುವಂತಹ ಫಾರ್ಮೇಸಿಯಾದಂತಹ ನಿಯತ ಬೀದಿ ಪ್ರದರ್ಶನಗಳು ಹಾಗೂ ವಲಯ ನಿರ್ದಿಷ್ಟ ಕಾರ್ಯಕ್ರಮಗಳ ಮುಖಾಂತರ ಕರ್ನಾಟಕ ಔಷಧ ವಸ್ತುಗಳ ವಲಯದ ಬಗ್ಗೆ ಗಮನ ಸೆಳೆಯುವುದು. [ಅನುಬಂಧ–3(3)(ಎ ಮತ್ತು ಬಿ) ಅನ್ನು ನೋಡಿ].

4.5. ಸರಳ ಮತ್ತು ಕಡಿಮೆ ವಹಿವಾಟು ವೆಚ್ಚದೊಂದಿಗೆ ಯೋಜನೆಗಳನ್ನು ಸ್ಥಾಪಿಸಲು ಬಂಡವಾಳ ಹೂಡಿಕೆದಾರರಿಗೆ ಅನುಕೂಲ ಒದಗಿಸುವ ವ್ಯವಸ್ಥೆಯನ್ನು ವೃದ್ಧಿಗೊಳಿಸುವುದು [ಅನುಬಂಧ 3(4)ಅನ್ನು ನೋಡಿ].

4.6. ವಿವಿಧ ಹೆಚ್ಚುವರಿ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಮೂಲಕ ಔಷಧ ವಸ್ತುಗಳ ಕೈಗಾರಿಕಾ ವಲಯಕ್ಕೆ ಪ್ರೋತ್ಸಾಹ ನೀಡುವುದು [ಅನುಬಂಧ–2 ಮತ್ತು 3ನ್ನು ನೋಡಿ].

4.7. ಸಾರ್ವಜನಿಕ ಆರೋಗ್ಯವನ್ನು ಸಂರಕ್ಷಿಸಲು ತಯಾರಿಕಾ ಪ್ರಕ್ರಿಯೆಯಲ್ಲಿ ಅಳವಡಿಸಿಕೊಂಡ ಗುಣಮಟ್ಟದ ಮತ್ತು ಅತ್ಯುತ್ತಮವಾದ ಪದ್ಧತಿಗಳನ್ನು ಮೇಲ್ವಿಚಾರಣೆ ಮತ್ತು ಗುಣಮಟ್ಟವನ್ನು ಖಚಿತಪಡಿಸಿಕೊಂಡು ಬರಲು ಆಡಳಿತ ಯಂತ್ರವನ್ನು ಬಲಪಡಿಸುವುದು.[5.12ಅನ್ನು ನೋಡಿ].

**5. ಕಾರ್ಯನೀತಿ ಕ್ರಮಗಳು:**

5.1. ಫಾರ್ಮಾ ವಲಯಕ್ಕೆ ವಿಶೇಷ ಮೂಲಭೂತ ಸೌಕರ್ಯ

**5.1.1. ಫಾರ್ಮಾ ಪಾರ್ಕ್‌ಗಳು:**

ಕರ್ನಾಟಕವು ರಾಜ್ಯದಾದ್ಯಂತ ಕೈಗಾರಿಕೆ ಮತ್ತು ವ್ಯಾಪಾರದ ಬೆಳವಣಿಗೆಗಾಗಿ ಭೂಮಿ, ನೀರು, ವಿದ್ಯುತ್ ಮತ್ತು ರಸ್ತೆ ಸಂಪರ್ಕದಂತಹ ಗುಣಮಟ್ಟದ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಶ್ರಮಿಸುತ್ತಿದೆ.ವ್ಯವಸ್ಥಿತವಾದ ಬೆಳವಣಿಗೆಗಾಗಿ ಔಷಧ ವಸ್ತುಗಳ ವಲಯಕ್ಕೆ ವಿಶೇಷ ಜ್ಞಾನದ ಮೂಲಭೂತ ಸೌಕರ್ಯದ ಅಗತ್ಯವಿರುತ್ತದೆ.ಗುಂಪು ಗುಂಪಾಗಿರುವುದು ಮತ್ತು ಒಟ್ಟಾಗಿರುವುದರಿಂದ ಪೂರೈಕೆ ಸರಪಳಿಯ ಸಂವೇದನಶೀಲತೆಯು ಹೆಚ್ಚುತ್ತದೆ.ಮಾರುಕಟ್ಟೆ ಮತ್ತು ಪ್ರತಿಭೆಯ ಸುಲಭ ಲಭ್ಯತೆಗೆ ಅವಕಾಶ ಕಲ್ಪಿಸುತ್ತದೆ ಹಾಗೂ ಸರಕು ಸಾಗಾಣಿಕೆಯ ವೆಚ್ಚಗಳು ಗಣನೀಯವಾಗಿ ಕಡಿಮೆಯಾಗುತ್ತದೆ ಎಂಬುದು ಒಂದು ಜಾಗತಿಕ ಅನುಭವವಾಗಿದೆ.ಈ ಪರಿಕಲ್ಪನೆಯ ಅನುಕೂಲವನ್ನು ಪಡೆಯಲು ಸಾರ್ವಜಕನಿಕ–ಖಾಸಗಿ ಸಹಭಾಗಿತ್ವದ ಮೂಲಕ ಕರ್ನಾಟಕದ ಬೆಳವಣಿಗೆಗೆ ಸಾಧ್ಯವಿರುವ ಸ್ಥಳಗಳಲ್ಲಿ ಔಷಧೀಯ ಪಾರ್ಕ್‌ಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಿದೆ.

ಈ ಪಾರ್ಕ್‌ಗಳು, ಸಾಮಾನ್ಯ ಹೊರಹರಿಯುವಿಕೆಯ ನೀರು ಸಂಸ್ಕರಣ ಸ್ಥಾವರ (ಸಿಇಟಿಪಿ) (ಸಾಮಾನ್ಯ ಪರೀಕ್ಷಾ ಪ್ರಯೋಗಾಲಯ ಉಗ್ರಾಣದೊಂದಿಗೆ ಶೀತಲೀಕರಣ) ಅದ್ವಿತೀಯವಾಗಿರುವ ವಿದ್ಯುತ್ ಕೇಂದ್ರ ಮೊದಲಾದಂಥ ವಿಸ್ತೃತ ಮೂಲಭೂತ ಸೌಲಭ್ಯಗಳೊಂದಿಗೆ ಸಜ್ಜುಗೊಂಡಿರಬೇಕು.ಈ ಪಾರ್ಕ್‌ಗಳಲ್ಲಿ "ಕೆಲಸಕ್ಕೆ ನಡೆದು ಹೋಗು" ಪರಿಕಲ್ಪನೆಗೆ ಅನುಕೂಲ ಕಲ್ಪಿಸುವ ನಿಟ್ಟಿನಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳೊಂದಿಗೆ ವಸತಿ ಸೌಕರ್ಯಗಳನ್ನು ಕೂಡ ಸೃಜಿಸಲಾಗುವುದು.ಮೂಲ ಸೌಕರ್ಯ ನೀತಿ, ಜೈವಿಕ ತಂತ್ರಜ್ಞಾನ ನೀತಿ ಮುಂತಾದ ಇತರ ನೀತಿಗಳಡಿ ಲಭ್ಯವಿರುವ ಬೆಂಬಲ ವ್ಯವಸ್ಥೆಗಳು ಮತ್ತು ಪ್ರೋತ್ಸಾಹಕಗಳನ್ನು ಇಂತಹ ಪಾರ್ಕ್‌ಗಳ ಸ್ಥಾಪನೆಗಾಗಿ ಒಟ್ಟುಗೂಡಿಸಲಾಗುವುದು (ಅನುಬಂಧ – 3(1)).

**5.1.2. ವಿಶೇಷ ಆರ್ಥಿಕ ವಲಯಗಳು:**

ಫಾರ್ಮಾ ವಲಯದಿಂದ ರಫ್ತುಗಳನ್ನು ವೃದ್ಧಿಸುವ ಸಲುವಾಗಿ ಕರ್ನಾಟಕದ ವಿಶೇಷ ಆರ್ಥಿಕ ವಲಯ (ಎಸ್‌ಇಜಡ್) ನೀತಿಯಲ್ಲಿ ಚಾಲ್ತಿಯಲ್ಲಿರುವ ಉಪಬಂಧಗಳ ಮೇರೆಗೆ ರಾಜ್ಯದಲ್ಲಿ ವಿಶೇಷ ಆರ್ಥಿಕ ವಲಯಗಳನ್ನು (ಎಸ್‌ಇಜಡ್‌ಗಳ) ಸ್ಥಾಪಿಸಲು ಸಹ ಪ್ರೋತ್ಸಾಹ ನೀಡಲಾಗುವುದು.ವಿಶೇಷ ಆರ್ಥಿಕ ವಲಯ (ಎಸ್‌ಇಜಡ್) ಪ್ರವರ್ತಕರುಗಳಿಗೆ ಹಾಗೂ ವಿಶೇಷ ಆರ್ಥಿಕ ವಲಯಗಳಲ್ಲಿನ ಘಟಕಗಳಿಗೆ ಸಹ ರಾಜ್ಯ ಮತ್ತು ಭಾರತ ಸರ್ಕಾರದ ವಿಶೇಷ ಆರ್ಥಿಕ ವಲಯ ನೀತಿಗಳಿಗನುಸಾರವಾಗಿ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳನ್ನು ನೀಡಲಾಗುವುದು.

**5.2. ಸಂಶೋಧನೆ ಮತ್ತು ಅಭಿವೃದ್ಧಿ:**

ಹೆಚ್ಚಿನ ಸಂಖ್ಯೆಯ ಶಿಕ್ಷಣ ಸಂಸ್ಥೆಗಳು ಹಾಗೂ ಔಷಧ ವಸ್ತುಗಳ ಕಂಪನಿಗಳೊಂದಿಗೆ ಕರ್ನಾಟಕವು ಪ್ರವೃತ್ತಿ ಬೆಲೆ ಸಮರ್ಥತೆ ಅಗತ್ಯವಿರುವ ಜ್ಞಾನದ ಮೂಲ ಮತ್ತು ಸಾಮರ್ಥ್ಯಗಳನ್ನು ಹೊಂದಿರುತ್ತದೆ. ಇದು ರಾಜ್ಯದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಬಹಳಷ್ಟು ಸಾಧ್ಯಾವಕಾಶಗಳನ್ನು ನೀಡುತ್ತದೆ.ನೀತಿಯು, ರಾಜ್ಯದಲ್ಲಿ ಈಗಾಗಲೇ ಲಭ್ಯವಿರುವ ಶಕ್ತಿ ಸಾಮರ್ಥ್ಯಗಳನ್ನು ವೃದ್ಧಿಸಲು ಫಾರ್ಮಾ ವಲಯಕ್ಕೆ ಸಂಬಂಧಿಸಿದ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡುತ್ತದೆ. ಕೈಗಾರಿಕೆ ಮತ್ತು ಶಿಕ್ಷಣ ಸಂಸ್ಥೆಗಳು (ಅಕಾಡೆಮಿಯು) ಕೈಗೊಂಡ ಸಹಭಾಗಿತ್ವದ ಸಂಶೋಧನೆ ಮತ್ತು ಅಭಿವೃದ್ಧಿ ಕಾರ್ಯ ಚಟುವಟಿಕೆಗಳಿಗೆ ಉತ್ತೇಜನ ನೀಡುವುದಕ್ಕಾಗಿ ಬೆಂಬಲದಾಯಕ ಆರ್ಥಿಕ ಪ್ರೋತ್ಸಾಹಕಗಳನ್ನು ನೀಡಲಾಗುವುದು [ಅನುಬಂಧ–3(5)(ಎ) ಅನ್ನು ನೋಡಿ].

ಪ್ರವರ್ಧಮಾನಕ್ಕೆ ಬರುತ್ತಿರುವ ಜಾಗತಿಕ ಚಿತ್ರಣದಲ್ಲಿ ಫಾರ್ಮಾ ವಲಯದ ಸುಸ್ಥಿರವಾದ ಅಭಿವೃದ್ಧಿಗೆ ನಾವೀನ್ಯತೆಯು ಮುಖ್ಯವಾಗಿರುತ್ತದೆ. ಕೈಗಾರಿಕೆ ಮತ್ತು ಸಂಸ್ಥೆಗಳ ಸಹಯೋಗದಲ್ಲಿ ಕೈಗೆತ್ತಿಕೊಂಡ ಸಂಶೋಧನಾ ಯೋಜನೆಗಳಿಗೆ ಪ್ರೋತ್ಸಾಹ ನೀಡಲು ಅನುಮೋದಿತ ಜೈವಿಕ–ಲಭ್ಯತೆ ಮತ್ತು ಜೈವಿಕ–ಸಮಾನತೆ ಅಧ್ಯಯನಗಳು ಹಾಗೂ ಅಧಿಕೃತ ಪ್ರಾಯೋಗಿಕ ಪರೀಕ್ಷೆಗಳೂ (ಕ್ಲಿನಿಕಲ್ ಟ್ರೈಯಲ್ಸ್) ಸೇರಿದಂತೆ ಇಂತಹ ಸಂಶೋಧನಾ ಯೋಜನೆಗಳಿಗೆ ತಗಲುವ ಅಧಿಕ ಪ್ರಮಾಣದ ವೆಚ್ಚವನ್ನು ಭಾಗಶ: ಮಿತಿಗೊಳಿಸಲು ಆರ್ಥಿಕ ಅನುದಾನದ ಮೂಲಕ ಅವುಗಳಿಗೆ ಬೆಂಬಲ ನೀಡಲಾಗುವುದು [ಅನುಬಂಧ–3 (5–ಬಿ) ಅನ್ನು ನೋಡಿ]

ಬೌದ್ಧಿಕ ಆಸ್ತಿ ಹಕ್ಕುಗಳ (ಐಪಿಆರ್‌ಗಳು) ರಕ್ಷಣೆಗೆ ಪೇಟೆಂಟ್‌ಗಳನ್ನು ಪಡೆಯಲು ಭಾರತದಲ್ಲಿ ಮತ್ತು ಇತರ ದೇಶಗಳಲ್ಲಿ ಪೇಟೆಂಟ್ ನೋಂದಣಿಗಾಗಿ ಪ್ರೋತ್ಸಾಹಕಗಳ ರೂಪದಲ್ಲಿ ಹಣಕಾಸಿನ ಬೆಂಬಲ ನೀಡಲಾಗುವುದು [ಅನುಬಂಧ–3 (5(ಸಿ)]

**5.3. ಶಿಕ್ಷಣ ಸಂಸ್ಥೆ ಜಾಲ:**

ಕರ್ನಾಟಕವು ಫಾರ್ಮಸಿ ಕೋರ್ಸುಗಳನ್ನು ನೀಡುವ ಶಿಕ್ಷಣ ಸಂಸ್ಥೆಗಳ ಒಂದು ಬಲವಾದ ತಳಪಾಯವನ್ನು ಹೊಂದಿದೆ.ಪ್ರಸ್ತುತ, ರಾಜ್ಯವು ಸುಮಾರು 75 ಪದವಿ ಮತ್ತು 40 ಸ್ನಾತಕೋತ್ತರ ಕಾಲೇಜುಗಳನ್ನು ಹೊಂದಿದ್ದು, ಅವುಗಳ ಪೈಕಿ ಕೆಲವು ಅತ್ಯಂತ ಪ್ರತಿಷ್ಠಿತ ಕಾಲೇಜುಗಳಾಗಿರುತ್ತವೆ. ಜೊತೆಗೆ, ಭಾರತೀಯ ವಿಜ್ಞಾನ ಸಂಸ್ಥೆ, ಜವಾಹರ್‌ಲಾಲ್ ನೆಹರು ಪ್ರೌಢ ವಿಜ್ಞಾನ ಸಂಶೋಧನಾ ಕೇಂದ್ರ, ಮೊದಲಾದಂಥ ಅತ್ಯುನ್ನತ ಕೇಂದ್ರಗಳು ಸಹ ರಾಜ್ಯದಲ್ಲಿದ್ದು, ಇವು ಔಷಧ ವಸ್ತುಗಳ ವಲಯಕ್ಕೆ ಬೆಂಬಲವಾಗಿ ಅತ್ಯಗತ್ಯವಾದ ಶಿಕ್ಷಣವನ್ನು ನೀಡುತ್ತಿವೆ. ಸರ್ಕಾರವು ಕರ್ನಾಟಕದಾದ್ಯಂತ ಫಿನಿಷಿಂಗ್ ಸ್ಕೂಲ್ ಫಾರ್ ಫಾರ್ಮಸ್ಯೂಟಿಕಲ್ ಲರ್ನಿಂಗ್ ಅನ್ನು ಸ್ಥಾಪಿಸುವಲ್ಲಿ ಆಯ್ದ ಮತ್ತು ಪ್ರತಿಷ್ಠಿತ ಔಷಧ ಶಿಕ್ಷಣ ಸಂಸ್ಥೆಗಳಿಗೆ ಬೆಂಬಲ ನೀಡುತ್ತದೆ. ಈ ಶಾಲೆಗಳು ಈ ವಲಯಕ್ಕೆ ಹೊಸದಾಗಿ ಸೇರ್ಪಡೆಯಾಗುವ ಹಾಗೂ ಹಾಲಿಯಿರುವ ನೌಕರರ ಕೊಡುಗೆಗಳನ್ನು ಹೆಚ್ಚಿಸುವ ಉದ್ಯಮ–ನಿರ್ದಿಷ್ಟ ಕುಶಲತೆಗಳನ್ನು ಕಲಿಸಿಕೊಡಲು ಪ್ರಯತ್ನಿಸಲಿವೆ. ಕೋರ್ಸುಗಳಲ್ಲಿ, ಔಷಧವಸ್ತುಗಳ ಘಟಕಗಳ ಕಾರ್ಯಾಚರಣೆಗಳಲ್ಲಿ ವೃತ್ತಿಪರ ತರಬೇತಿ, ಫಾರ್ಮಸಿಯಲ್ಲಿ ಉದ್ಯಮಶೀಲತೆಯ ಅಭಿವೃದ್ಧಿ, ಗಿಡಮೂಲಿಕೆ ಔಷಧ ತಂತ್ರಜ್ಞಾನ, ಸಂಶೋಧನಾ ನೈಪುಣ್ಯತೆ ಅಭಿವೃದ್ಧಿಗಳು, ಗುಣಮಟ್ಟ ನಿಯಂತ್ರಣ, ಹಸ್ತಪ್ರತಿಯ ಬರಹ, ಪೇಟೆಂಟ್, ಸಿಜಿಎಂಪಿ ವಿನಿಯಮಗಳು ಮತ್ತು ಇತರ ನಿಯಂತ್ರಕ ವ್ಯವಹಾರಗಳು ಸೇರಿರುತ್ತವೆ.

ಸರ್ಕಾರವು ವಿಷನ್‌ಗ್ರೂಪ್ ಆಯ್ಕೆಗೊಂಡ ಕೆಪಿಡಿಸಿಯಿಂದ ಮೇಲ್ವಿಚಾರಣೆ ಮಾಡುವ ಹಾಗೂ ಅಂಗೀಕೃತ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಒಂದು ಫಿನಿಷಿಂಗ್ ಸ್ಕೂಲ್‌ಗೆ ಆರಂಭಿಕವಾಗಿ ಬೆಂಬಲ ನೀಡಬಹುದು.ರಾಜ್ಯ ಸರ್ಕಾರವು ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಅಗತ್ಯವಿರುವ ಪ್ರಯೋಗಾಲಯ ಸಲಕರಣೆಗಳು ಮತ್ತು ಇತರ ತಂತ್ರಜ್ಞಾನ ಪೂರಕ ಯಂತ್ರೋಪಕರಣಗಳು ಹಾಗೂ ಸಾಧನ ಸಾಮಗ್ರಿಗಳನ್ನು ರೂಪಿಸುವ ಸಲುವಾಗಿ ಪ್ರತಿ ಫಿನಿಷಿಂಗ್ ಸ್ಕೂಲ್‌ಗೆ ಗರಿಷ್ಠ ಒಂದು ಕೋಟಿ ರೂಪಾಯಿಯ ಮಿತಿಗೆ ಒಳಪಟ್ಟು ವೆಚ್ಚದ ಶೇ.25ರವರೆಗೆ ಹಣಕಾಸು ಬೆಂಬಲ ನೀಡುವುದು.

ಸರ್ಕಾರವು ಔಷಧ ವಸ್ತುಗಳ ಉದ್ಯಮದಲ್ಲಿ ನಿಯೋಜನೆಗೆ ಸಿದ್ಧವಾಗಿರುವ ಕುಶಲ ಸಿಬ್ಬಂದಿಯ ಕೊರತೆಯನ್ನು ನೀಗಿಸುವ ಸಲುವಾಗಿ ಈ ಫಿನಿಷಿಂಗ್ ಸ್ಕೂಲ್‌ಗಳಲ್ಲಿ ತರಬೇತಿ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಸ್ಟೈಫೆಂಡ್‌ನ್ನೂ ಸಹ ನೀಡುವುದು.

**5.4. ಬೃಹತ್ ಯೋಜನೆಗಳ ಮೇಲೆ ಒತ್ತು ನೀಡುವುದು:**

ಭಾರತದಲ್ಲಿ ಔಷಧವಸ್ತುಗಳ ಮಾರುಕಟ್ಟೆಯು ಬಹಳಷ್ಟು ಚದುರಿಹೋಗಿರುತ್ತದೆ.ಮಾರುಕಟ್ಟೆಯ ಸುಮಾರು ಶೇ.70ರಷ್ಟು ನಿಯಂತ್ರಣವನ್ನು ಪ್ರಮುಖ ಸಂಸ್ಥೆಗಳೇ ಹೊಂದಿವೆ.ಜಾಗತಿಕ ಮಾರುಕಟ್ಟೆಯಲ್ಲಿ ಸ್ಪರ್ಧೆಗಿಳಿಯಲು ಜಾಗತಿಕ ಬೃಹತ್ ಸಂಸ್ಥೆಗಳಿಗೆ ಸರಿಸಮನಾದ ತಯಾರಿಕಾ ಸಾಮರ್ಥ್ಯಗಳನ್ನು ಸೃಜಿಸುವ ಅಗತ್ಯವಿದೆ. ನೀತಿಯು ಬೃಹತ್ ಔಷಧ ವಸ್ತುಗಳ ಯೋಜನೆಗಳನ್ನು ಕರ್ನಾಟಕಕ್ಕೆ ಆಕರ್ಷಿಸುವ ಬಗ್ಗೆ ಮತ್ತು ಅದನ್ನು ಜಾಗತಿಕವಾಗಿ ಸ್ಪರ್ಧಾತ್ಮಕವಾಗಿ ಎದುರಿಸಲು ವಿಶೇಷ ಒತ್ತು ನೀಡುತ್ತದೆ.

ಎಂಎಸ್ಎಂಇ ವಲಯಕ್ಕೆ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಆಕರ್ಷಕ ಪ್ಯಾಕೇಜನ್ನು ನೀಡುವಾಗ ಈ ನೀತಿಯು, ಬೃಹತ್ ಯೋಜನೆಗಳ ಪೂರಕ, ಅಧೀನ ಹಾಗೂ ಬೆಂಬಲ ಚಟುವಟಿಕೆಗಳಿಗೆ ಹೆಚ್ಚು ಅವಕಾಶವನ್ನು ಸೃಜಿಸಲು ಬದ್ಧವಾಗಿರುವುದರಿಂದ ಅಂಥ ಯೋಜನೆಗಳನ್ನು ಆಕರ್ಷಿಸಲು ವಿಶೇಷ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳನ್ನು ಒದಗಿಸುತ್ತದೆ.[ಅನುಬಂಧ–2 (10 ಮತ್ತು 11) ಅನ್ನು ನೋಡಿ].

**5.5. ಸಾಹಸೋದ್ಯಮ ಮೂಲಧನ ನಿಧಿಗಳು:**

ಔಷಧ ವಸ್ತುಗಳ ವಲಯದಲ್ಲಿ ಉದಯೋನ್ಮುಖ ವಾಣಿಜ್ಯೋದ್ಯಮಿಗಳಿಗೆ ಸಾಹಸೋದ್ಯಮವನ್ನು ಸ್ಥಾಪಿಸುವ ಆರಂಭಿಕ ಹಂತದಲ್ಲಿ ಹಣಕಾಸು ನೆರವು ಅಗತ್ಯವಾಗಬಹುದು.ಅಂತಹ ವಾಣಿಜ್ಯೋದ್ಯಮಿಗಳಿಗೆ ಅಗತ್ಯತೆ ಆಧರಿಸಿ ಈಕ್ವಿಟಿ ನೆರವನ್ನು ಒದಗಿಸಲು, ರಾಜ್ಯ ಸರ್ಕಾರವು, ಸರ್ಕಾರದಿಂದ ಶೇಕಡಾ 26ರಷ್ಟು ವಂತಿಗೆಯೊಂದಿಗೆ 50 ಕೋಟಿ ರೂಪಾಯಿಗಳ ಮೂಲಧನವುಳ್ಳ ಸಾಹಸೋದ್ಯಮಮೂಲಧನ ನಿಧಿಯನ್ನು ಸ್ಥಾಪಿಸಲಿದೆ.ಬಾಕಿ ಉಳಿದ ನಿಧಿಯನ್ನು ಕೈಗಾರಿಕೆಗಳು, ಹಣಕಾಸು ಸಂಸ್ಥೆಗಳು ಮತ್ತು ಖಾಸಗಿ ಬಂಡವಾಳ ಹೂಡಿಕೆದಾರರು ಮೊದಲಾದಂಥ ಖಾಸಗಿ ವಲಯವು ಕೊಡುಗೆ ನೀಡಲಿದೆ.

**5.6. ನೀರು ಮತ್ತು ವಿದ್ಯುತ್ ಸರಬರಾಜು:**

ಸರ್ಕಾರವು, ಔಷಧ ವಸ್ತುಗಳ ತಯಾರಿಕಾ ಯೋಜನೆಗಳಿಗೆ ತಡೆರಹಿತ ಮತ್ತು ಗುಣಮಟ್ಟದ ವಿದ್ಯುತ್ ಸರಬರಾಜನ್ನು ಒದಗಿಸಲು ಪ್ರಯತ್ನಿಸುತ್ತಿದೆ.ಸಾಧ್ಯವಿರುವ ಕಡೆಗಳಲ್ಲೆಲ್ಲಾ ಯೋಜನೆಗಳಿಗೆ ಸಮರ್ಪಕ ನೀರು ಸರಬರಾಜನ್ನು ಕಲ್ಪಿಸಲಾಗಿದೆ.ಕೈಗಾರಿಕೆಗಳು ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಲಭ್ಯವಿರುವ ಹತ್ತಿರದ ಮೂಲಗಳಿಂದ ನೀರು ಪೂರೈಕೆಯನ್ನು ಹೆಚ್ಚಿಸಿಕೊಳ್ಳುವಂತೆ ಕೂಡ ಪ್ರೋತ್ಸಾಹಿಸಲಾಗುತ್ತಿದೆ.ಅಲ್ಲದೆ, ಕೈಗಾರಿಕೆಗಳಿಗೆ ತಮ್ಮ ಅಗತ್ಯತೆಗಳಿಗನುಗುಣವಾಗಿ ಸೌರಶಕ್ತಿ, ಪವನಶಕ್ತಿ, ಜೈವಿಕ ಇಂಧನ, ಬಾಯ್ಲರ್‌ಗೆ ದ್ರಾವಕ (ಸಾಲ್ವೆಂಟ್) ತ್ಯಾಜ್ಯದ ಬಳಕೆ ಮೊದಲಾದಂಥ ಅಸಾಂಪ್ರದಾಯಕ ಇಂಧನ ಮೂಲಗಳನ್ನು ಹೊಂದಲು ಬೆಂಬಲ ನೀಡಲಾಗುತ್ತದೆ.ಮಳೆ ನೀರು ಸಂಗ್ರಹ ನೀರಿನ ಪುನರ್‌ಬಳಕೆ ಮತ್ತು ಇತರ ಸಂರಕ್ಷಣಾ ಕ್ರಮಗಳ ಅಳವಡಿಕೆಗೆ ಸಹ ಪ್ರೋತ್ಸಾಹಕಗಳ ಮೂಲಕ ಬೆಂಬಲ ನೀಡಲಾಗುವುದು. [ಅನುಬಂಧ–2(15 ಮತ್ತು 16) ಅನ್ನು ನೋಡಿ]

**5.7. ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರಗಳು**

**5..7.1. ವೈಯಕ್ತಿಕ ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರಗಳು**

ಔಷಧ ವಸ್ತುಗಳ ತಯಾರಿಕಾ ಕೈಗಾರಿಕೆಗಳು ಭಾರೀ ಪ್ರಮಾಣದ ಕೈಗಾರಿಕಾ ತ್ಯಾಜ್ಯವನ್ನು ಉತ್ಪತ್ತಿ ಮಾಡುವುದರಿಂದ, ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರಗಳು ಅತ್ಯಾವಶ್ಯಕವಾಗಿವೆ.ಒಂದು ಬಾರಿಯ ಆರ್ಥಿಕ ಪ್ರೋತ್ಸಾಹಕಗಳನ್ನು ನೀಡುವ ಮೂಲಕ ಮಾಲಿನ್ಯ ಸಂಬಂಧ ಸಮಸ್ಯೆಗಳನ್ನು ನಿವಾರಣೆ ಮಾಡಲು ಸ್ವತಂತ್ರವಾಗಿ ಕಾರ್ಯನಿರ್ವಹಿಸುವ ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರಗಳನ್ನು ಸ್ಥಾಪಿಸಲು ಕೈಗಾರಿಕೆಗಳಿಗೆ ಬೆಂಬಲ ನೀಡಲಾಗುತ್ತದೆ. [ಅನುಬಂಧ–2(8) ಅನ್ನು ನೋಡಿ]

**5.7.2. ಒಟ್ಟಾಗಿ ನಿರ್ವಹಿಸಲಾದ ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರಗಳು:**

ಫಾರ್ಮಾ (ಔಷಧಿ) ಪಾರ್ಕುಗಳು, ವಿಶೇಷ ಆರ್ಥಿಕ ವಲಯ (ಎಸ್‌ಇಜಡ್)ಗಳು ಮತ್ತು ಇತರ ಔಷಧವಸ್ತುಗಳ ಕೈಗಾರಿಕೆಗಳ ಗುಂಪುಗಳಲ್ಲಿ ಸರ್ಕಾರಿ–ಖಾಸಗಿ ಸಹಭಾಗಿತ್ವದ ಮಾದರಿಯಲ್ಲಿ ಸ್ಥಾಪಿಸಲಾಗುವ ಸಾಮಾನ್ಯ ಹೊರಹರಿಯುವ ನೀರು ಸಂಸ್ಕರಣಾ ಸ್ಥಾವರ(ಸಿಇಟಿಪಿ)ಗಳಿಗೆ ಬಂಡವಾಳ ಹೂಡಿಕೆಗಳನ್ನು ಹೆಚ್ಚಿಸಲು ಒಂದು ಬಾರಿಯ ಅನುದಾನ ಬೆಂಬಲ ನೀಡಲಾಗುವುದು. [ಅನುಬಂಧ–3 (1)(ಸಿ) ಅನ್ನು ನೋಡಿ]

**5.8. ಗೋಗ್ರೀನ್ ಉಪಕ್ರಮಗಳು:**

ಮೂಲದಲ್ಲೇ ತ್ಯಾಜ್ಯ ವಸ್ತುಗಳು ಉಂಟಾಗುವುದನ್ನು ಕಡಿಮೆಗೊಳಿಸುವುದಕ್ಕಾಗಿ ಅಥವಾ ತ್ಯಾಜ್ಯ ವಸ್ತುಗಳ ಮರುಬಳಕೆಗಾಗಿ ಕ್ರಮಗಳನ್ನು ಕೈಗೊಳ್ಳುವ ಔಷಧ ತಯಾರಿಕಾ ಕಂಪನಿಗಳಿಗೆ ಉತ್ಪಾದನಾ ಚಟುವಟಿಕೆಗಳನ್ನು ತ್ಯಾಜ್ಯ ವಸ್ತುಗಳನ್ನು ಕಡಿಮೆ ಮಾಡಲು ಪ್ರೋತ್ಸಾಹ ನೀಡಲಾಗುವುದು.ಅಂಥ ಕ್ರಮಗಳಿಗೆ ಗರಿಷ್ಠ 50ಲಕ್ಷ ರೂಪಾಯಿಗಳ ಮಿತಿಗೆ ಒಳಪಟ್ಟು ವೆಚ್ಚದ ಶೇ.50ರವರಗೆ ಸಹಾಯಧನ ನೀಡಲಾಗುವುದು.

ಸರ್ಕಾರವು ಖಾಸಗಿ ಸಹಭಾಗಿತ್ವದಲ್ಲಿ ತ್ಯಾಜ್ಯ ವಸ್ತುಗಳ ವಿನಿಮಯಗಳನ್ನು ಸ್ಥಾಪಿಸುವ ಉದ್ದೇಶವನ್ನೂ ಸಹ ಹೊಂದಿದ್ದು, ಇದರಿಂದ ಹೇಗಿದೆಯೋ ಹಾಗೆ ಬಳಸುವುದಕ್ಕಾಗಿ ಅಥವಾ ಸಂಸ್ಕರಣೆಯ ನಂತರ ಮರುಬಳಕೆಗಾಗಿ ತ್ಯಾಜ್ಯ ವಸ್ತುಗಳನ್ನು ಇನ್ನೊಂದು ಕಂಪನಿಗೆ ವರ್ಗಾಯಿಸುವುದಕ್ಕೆ ಸಹಾಯವಾಗಲಿದೆ.

**5.9. ಕೋಲ್ಡ್–ಚೈನ್(ಶೀತಲ ಸರಪಳಿ) ಸೌಲಭ್ಯಗಳು:**

ಸರ್ಕಾರವು, ಪೂರೈಕೆ ಸರಪಳಿಯುದ್ದಕ್ಕೂ ಉಷ್ಣಾಂಶ ಸೂಕ್ಷ್ಮ ಸಂವೇದನೆಯುಳ್ಳ ಔಷಧ ವಸ್ತುಗಳ ಉಷ್ಣಾಂಶ ನಿಯಂತ್ರಿಕ ಸಾಗಣೆಗಾಗಿ ವಿತರಣಾ ಜಾಲವನ್ನು ಸೃಜಿಸುವಲ್ಲಿ ಉದ್ಯಮಕ್ಕೆ ಪ್ರೋತ್ಸಾಹ ನೀಡುತ್ತದೆ. ಬಂಧಕ ಬಳಕೆಗಾಗಿ ಉದ್ಯಮವು ಮಾಡುವ ಶೀಥಲೀಕರಣ ಸೌಲಭ್ಯವುಳ್ಳ (ರೆಫ್ರಿಜಿರೇಟೆಡ್) ವ್ಯಾನುಗಳ ಖರೀದಿಯನ್ನು ಘಟಕದ ಬಂಡವಾಳ ಹೂಡಿಕೆಯ ಭಾಗವೆಂದು ಪರಿಗಣಿಸಲಾಗುವುದು.

**5.10. ಗುಣಮಟ್ಟದ ಖಾತರಿ:**

ಅಧಿಕ ಸಂಖ್ಯೆಯ ಜಾರಿ ಅಧಿಕಾರಿಗಳನ್ನು ನೇಮಕ ಮಾಡಿಕೊಳ್ಳುವ ಮತ್ತು ಸಾಕಷ್ಟು ಅತ್ಯಾಧುನಿಕ ಪರೀಕ್ಷಾ ಸಾಧನಸಲಕರಣೆಗಳುಳ್ಳ ಔಷಧವಸ್ತುಗಳ ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸುವ ಮೂಲಕ ಹೆಚ್ಚುವರಿ ಮಾನವ ಶಕ್ತಿ ಹಾಗೂ ಆಧುನಿಕ ಸೌಲಭ್ಯಗಳನ್ನು ಒದಗಿಸಿ ಆಡಳಿತ ಯಂತ್ರವನ್ನು ಬಲಪಡಿಸಲಾಗುವುದು.

**5.11. ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳು**

**5.11.1. ಕೈಗಾರಿಕಾ ನೀತಿ– 2009–14**

ಔಷಧ ವಸ್ತುಗಳ ವಲಯಕ್ಕೆ ಸಮಪಾತ್ರ ವಹಿಸುವ ಪರಿಸರವನ್ನು ಒದಗಿಸಿಕೊಡುವ ಒಂದು ಪ್ರಯತ್ನವಾಗಿ ಬಂಡವಾಳ ಹೂಡಿಕೆಗಳಿಗೆ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಆಕರ್ಷಕ ಪ್ಯಾಕೇಜನ್ನು ಕಲ್ಪಿಸಿದೆ. ಈ ನೀತಿಯಲ್ಲಿ ಬಂಡವಾಳ ಹೂಡಿಕೆಗಳಿಗಾಗಿ ನೀಡುವ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಪ್ಯಾಕೇಜು, ಕರ್ನಾಟಕ ಸರ್ಕಾರವು ತನ್ನ ಆದೇಶ ಸಂಖ್ಯೆ:ಸಿಐ 233 ಎಸ್‌ಪಿಐ 2008 ಬೆಂಗಳೂರು ದಿನಾಂಕ 28–02–2009ರ ಮೇರೆಗೆ ಘೋಷಿಸಿದ ಅನುಬಂಧ–2, ಕರ್ನಾಟಕ ನೂತನ ಕೈಗಾರಿಕಾ ನೀತಿ 2009–14ರಲ್ಲಿ ವಿವರಿಸಲಾದಂತೆ ಅದೇ ರೀತಿಯ ಪ್ರೋತ್ಸಾಹಕಗಳ ಪ್ಯಾಕೇಜು ಆಗಿರತಕ್ಕದ್ದು. ಕೈಗಾರಿಕಾ ನೀತಿಯಲ್ಲಿ ನೀಡಲಾದ ಪ್ರೋತ್ಸಾಹಕಗಳ ಪ್ಯಾಕೇಜಿಗೂ ಮಿಗಿಲಾಗಿ ಈ ನೀತಿಯ ವ್ಯಾಪ್ತಿಯಡಿ ಬರುವ ಔಷಧ ವಸ್ತುಗಳ ವಲಯಕ್ಕೆ ಕೆಲವು ಹೆಚ್ಚಿನ ಪ್ರೋತ್ಸಾಹಕಗಳನ್ನು ನೀಡತಕ್ಕದ್ದು.

ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಪ್ಯಾಕೇಜನ್ನು ಕೊಡುವ ಉದ್ದೇಶಕ್ಕಾಗಿ ರಾಜ್ಯದ 176 ತಾಲ್ಲೂಕುಗಳನ್ನು ನಾಲ್ಕು ವಲಯಗಳನ್ನಾಗಿ ವರ್ಗೀಕರಿಸಲಾಗಿದೆ.ತಾಲ್ಲೂಕುಗಳನ್ನು ವಲಯಗಳನ್ನಾಗಿ ವಿಂಗಡಿಸಿದ ವರ್ಗೀಕರಣದ ವಿವರವು ಅನುಬಂಧ–1ರಲ್ಲಿದೆ. ಬಂಡವಾಳ ಹೂಡಿಕೆಗಳಿಗಾಗಿ ಈ ನೀತಿಯಲ್ಲಿ ಕೊಡಲಾದ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಪ್ಯಾಕೇಜು ಅನುಬಂಧ–2ರಲ್ಲಿದೆ.

ಔಷಧ ವಲಯಕ್ಕೆ ಕೊಡಲಾದ ಪ್ರೋತ್ಸಾಹಕಗಳ ಹೆಚ್ಚುವರಿ ಪ್ಯಾಕೇಜ್ ಅನುಬಂಧ–3 ರಲ್ಲಿದೆ.

ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳ ಮಂಜೂರಾತಿಗೆ ಸಂಬಂಧಿಸಿದ ಪರಿಭಾಷೆಗಳು ಹಾಗೂ ನಿಬಂಧನೆಗಳು ಮತ್ತು ಷರತ್ತುಗಳು ಅನುಬಂಧ–4ರಲ್ಲಿವೆ.

ಕೈಗಾರಿಕಾ ನೀತಿಯಲ್ಲಿ ಕೊಡಲಾದ ಪ್ರೋತ್ಸಾಹಕಗಳ ಪ್ಯಾಕೇಜನ್ನು ಮಾರ್ಪಡಿಸುವಾಗಲೆಲ್ಲಾ ಅದೇ ಮಾರ್ಪಾಡುಗಳನ್ನು ಈ ನೀತಿಗೆ ಕೂಡ ಯಥಾವತ್ತಾಗಿ ಅನ್ವಯವಾಗುವಂತೆ ಮಾಡತಕ್ಕದ್ದು.

**5.12. ಸಾಂಸ್ಥಿಕ ಬೆಂಬಲ:**

**5.12.1 ಔಷಧ ವಸ್ತುಗಳ ರಫ್ತು ಉತ್ತೇಜನ ಪರಿಷತ್ತು (ಫಾರ್ಮೆಕ್ಸಿಲ್):**

ರಫ್ತು ಉದ್ದೇಶಿತ ಔಷಧ ವಸ್ತುಗಳ ತಯಾರಿಕಾ ಕೈಗಾರಿಕೆಗಳಿಗೆ ಅಗತ್ಯ ಬೆಂಬಲವನ್ನು ನೀಡುವ ಸಲುವಾಗಿ, ರಾಜ್ಯ ಸರ್ಕಾರವು ಬೆಂಗಳೂರಿನಲ್ಲಿ ಔಷಧ ವಸ್ತುಗಳ ರಫ್ತು ಉತ್ತೇಜನ ಪರಿಷತ್ತಿನ (ಫಾರ್ಮೆಕ್ಸಿಲ್) ಶಾಖೆಯನ್ನು ಸ್ಥಾಪಿಸುವಂತೆ ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವುದು. ರಾಜ್ಯದಲ್ಲಿ ಶಾಖೆಯನ್ನು ತೆರೆಯುವುದರಿಂದ ಸ್ಥಳೀಯವಾಗಿ ಪರಿಷತ್ತಿನಿಂದ ಅಗತ್ಯವಾದ ಪ್ರಮಾಣಪತ್ರಗಳನ್ನು ಪಡೆಯಲು ಕಂಪನಿಗಳಿಗೆ ಅನುಕೂಲ ಮಾಡಿಕೊಟ್ಟಂತಾಗುತ್ತದೆ ಮತ್ತು ಪರಿಷತ್ತು ನಿರ್ವಹಿಸುತ್ತಿರುವ ವಿವಿಧ ಯೋಜನೆಗಳ ಪ್ರಯೋಜನಗಳನ್ನು ಪಡೆಯಲು ಕೈಗಾರಿಕೆಗಳಿಗೆ ಅನುಕೂಲವಾಗುತ್ತದೆ ಎಂಬುದಾಗಿ ಸಹ ನಿರೀಕ್ಷೆ ಮಾಡಲಾಗಿದೆ.

ಫಾರ್ಮಾ(ಔಷಧ) ವಲಯದಲ್ಲಿನ ಶಕ್ತಿ ಸಾಮರ್ಥ್ಯಗಳು ಹಾಗೂ ಅವಕಾಶಗಳ ಬಗ್ಗೆ ಜನರ ಗಮನ ಸೆಳೆಯುವ (ಪ್ರದರ್ಶಿಸುವ) ಸಲುವಾಗಿ, ದ್ವೈವಾರ್ಷಿಕ ಕಾರ್ಯಕ್ರಮ–ಫಾರ್ಮಾಸಿಯನ್ನು ಉದ್ದಿಮೆ ಹಾಗೂ ಇತರ ಸ್ಟೇಕ್‌ಹೋಲ್ಡರ್ ಸಹಯೋಗದಲ್ಲಿ ರಾಜ್ಯದಲ್ಲಿ ಆಯೋಜಿಸಲಾಗುತ್ತದೆ. ಸರ್ಕಾರವು ಪ್ರತಿ ಕಾರ್ಯಕ್ರಮಕ್ಕೆ 6 ಕೋಟಿ ರೂಪಾಯಿಗಳಿಗೆ ಮೀರದಂತೆ ಶೇಕಡಾ 50ರಷ್ಟು ನೆರವನ್ನು ನೀಡಲಿದೆ.

